ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಭಾರತದಲ್ಲಿ ವಿವಿಧ ಮತ ಧರ್ಮಗಳ ಜನರು ಸಹಬಾಳ್ವೆ ನಡೆಸುತ್ತಿದ್ದಾರೆ. ಅವರ ರಸ್ಪರ ಐಕ್ಯ ಮತ್ತು ಸಹಕಾರವು ದೇಶದ ಶ್ರೇಯೋಭಿವೃದ್ಧಿಗೆ ಅವಶ್ಯಕವಾಗಿದೆ. ುರದೃಷ್ಟವಶಾತ್, ಈ ಕ್ಷೇತ್ರದಲ್ಲಿ ಸ್ವತಂತ್ರ ಭಾರತದ ಈ ವರೆಗಿನ ಅನುಭವಗಳು ಉಜ್ವಲ ಥವಾ ಶುಭದಾಯಕವಾಗಿಲ್ಲ. ಕೋಮುಗಲಭೆಗಳು ಮತ್ತು ಜನಾಂಗೀಯ ಘರ್ಷಣೆಗಳು ತ್ಯ ಘಟನೆಯಾಗಿ ಬಿಟ್ಟಿದೆ. ಸಹಸ್ರಾರು ಜನರು ಕೊಲ್ಲಲ್ಪಟ್ಟು ಕೋಟ್ಯಾಂತರ ರೂಪಾಯಿಗಳ ಾತ್ತುಗಳು ನಾಶಗೊಂಡಿವೆ.

ಹಲವೊಮ್ಮೆ ಈ ಪರಸ್ಪರ ಅಂತರ ಮತ್ತು ಘರ್ಷಣೆಗಳಿಗೆ ವಿವಿಧ ಧರ್ಮ ದವರಲ್ಲಿರುವ ಪ್ಪು ತಿಳುವಳಿಕೆಗಳೇ ಕಾರಣವಾಗಿದೆ. ಅದನ್ನು ನಿವಾರಿಸಿ ಪರಸ್ಪರ ಅರಿತು ಸಾಮರಸ್ಯದ ಾತಾವರಣ ಮೂಡಿಸುವ ನಿಟ್ಟಿನಲ್ಲಿ ಸರಕಾರಗಳು ಅಕ್ಷಮ್ಯ ನಿರ್ಲಕ್ಷ್ಯ ತೋರಿಸುತ್ತಿವೆ. ೇಶದ ಶೈಕ್ಷಣಿಕ ಸಂಸ್ಥೆಗಳ ಇತಿಹಾಸ ಪಾಠಗಳೂ ಪರಸ್ಪರ ನಂಬಿಕೆ ಮತ್ತು ಸೌಹಾರ್ದ ೆಳೆಸುವ ಬದಲಾಗಿ ಶತ್ರುತ್ವ ಮತ್ತು ದ್ವೇಷಕ್ಕೆ ಪೂರಕವಾಗಿದೆ.

ಐತಿಹಾಸಿಕ ಕಾರಣಗಳು ಮತ್ತು ಕೆಲವು ಕೋಮುಶಕ್ತಿಗಳ ಯೋಜಿತ ಪ್ರಚಾರ ಳಿಂದಾಗಿ ಇಸ್ಲಾಮ್ ಮತ್ತು ಮುಸ್ಲಿಮರು ಗಂಭೀರ ತಪ್ಪು ತಿಳುವಳಿಕೆಗೆ ಗುರಿಯಾಗು ಂತಾಗಿದೆ. ಇದರಿಂದಾಗಿ ಇಸ್ಲಾಮ್ ಅನಾಗರಿಕ ಮತ್ತು ಕ್ರೂರ ಧರ್ಮವಾಗಿದೆ, ಮುಸ್ಲಿಮರಿಗೆ ಇತರ ಧರ್ಮೀಯರೊಂದಿಗೆ ಸೌಹಾರ್ದ ಮತ್ತು ಸಹಿಷ್ಣುತೆಯಿಂದ ಬಾಳಲು ಸಾಧ್ಯವಿಲ್ಲವೆಂಬ ಾವನೆ ಬೆಳೆದಿದೆ.

ಈ ಹಿನ್ನೆಲೆಯಲ್ಲಿ ಇಸ್ಲಾಮಿನ ಬಗೆಗಿನ ತಪ್ಪು ತಿಳುವಳಿಕೆಗಳನ್ನು ನಿವಾರಿಸುವ ಪ್ರಯತ್ನದ ಅಂಗವಾಗಿ ಈ ಕಿರುಕೃತಿಯನ್ನು ರಚಿಸಲಾಗಿದೆ. ಇತರ ಧರ್ಮೀಯರ ಬಗ್ಗೆ ಇಸ್ಲಾಮಿನ ಧೋರಣೆಯನ್ನು ಮೂಲ ಸಿದ್ಧಾಂತ ಮತ್ತು ಚಾರಿತ್ರಿಕ ಸತ್ಯಗಳ ಆಧಾರದಲ್ಲಿ ಸರಳವಾಗಿ ಇದರಲ್ಲಿ ವಿವರಿಸಲಾಗಿದೆ.

ಈ ಗ್ರಂಥದ ಕೊನೆಯ ಭಾಗದಲ್ಲಿ ಎರಡು ಅಧ್ಯಯನಾತ್ಮಕ ಅನುಬಂಧಗಳನ್ನು ಸೇರಿಸಲಾಗಿದೆ.

ಈ ಕೃತಿಯು ದೇಶದಲ್ಲಿ ಧರ್ಮ ಸಹಿಷ್ಣುತೆ ಮತ್ತು ಕೋಮು ಸೌಹಾರ್ದವನ್ನು ಬೆಳೆಸಿ ಗಲಭೆ ಘರ್ಷಣೆಗಳನ್ನು ನಿವಾರಿಸುವ, ಜಮಾಅತೆ ಇಸ್ಲಾಮಿ ಹಿಂದ್‌ನ ಘೋಷಿತ ನೀತಿಯನ್ನು ಈಡೇರಿಸುವ ಪ್ರಯತ್ನಗಳ ಒಂದು ಭಾಗವೂ ಆಗಿದೆ. ಸತ್ಯಶೋಧಕರಿಗೆ ವಾಸ್ತವಿಕತೆಗಳನ್ನು ಗ್ರಹಿಸಿ ತಪ್ಪು ತಿಳುವಳಿಕೆಗಳನ್ನು ನಿವಾರಿಸಲು ಇದು ಉಪಯುಕ್ತವಾದೀತೆಂದು ನಿರೀಕ್ಷಿಸುತ್ತೇವೆ. ಅದಕ್ಕಾಗಿ ಪ್ರಾರ್ಥಿಸುತ್ತೇವೆ.

ಶಾಂತಿ ಪ್ರಕಾಶನ

## ಅನುಕ್ರಮಣಿಕೆ

# ಒಂದೇ ಜಾತಿ ಒಂದೇ ವರ್ಗ

**ಮು**ಸ್ಲಿಮರಿಗೋರ್ವ ಅಲ್ಲಾಹ್, ಹಿಂದುಗಳಿಗೋರ್ವ ಈಶ್ವರ, ಕ್ರೈಸ್ತರಿಗೊಬ್ಬ ಪರಮಾತ್ಮ, ಯಹೂದಿಯರಿಗೊಬ್ಬ ದೇವ ಎಂಬೀ ಕಲ್ಪನೆಯು ಇಸ್ಲಾಮಿಗೆ ಅಪರಿಚಿತ ವಾಗಿದೆ. ಎಲ್ಲರ ದೇವನೂ ಒಬ್ಬನೇ. ಆತ ಏಕೈಕನು, ಅಖಿಲ ವಿಶ್ವದ ಸೃಷ್ಟಿಕರ್ತ, ಸಕಲ ಚರಾಚರಗಳ ಪ್ರಭು ಮತ್ತು ನಿಯಂತ್ರಕನೂ ಅವನೇ-

"ಹೇಳಿರಿ, ಅವನು ಅಲ್ಲಾಹನು, ಏಕೈಕನು, ಅಲ್ಲಾಹನು ಸಕಲರಿಂದಲೂ ನಿರಪೇಕ್ಷನು ಮತ್ತು ಸರ್ವರೂ ಅವನ ಅವಲಂಬಿತರು. ಅವನಿಗೆ ಯಾವುದೇ ಸಂತಾನವಿಲ್ಲ. ಅವನು ಯಾರ ಸಂತಾನವೂ ಅಲ್ಲ, ಮತ್ತು ಅವನಿಗೆ ಸರಿಸಮಾನರು ಯಾರೂ ಇಲ್ಲ."

(ಪವಿತ್ರ ಕುರ್‌ಆನ್, 112:1-4)

"ಅವನು ಪ್ರತಿಯೊಂದು ವಸ್ತುವನ್ನೂ ಸೃಷ್ಟಿಸಿದನು. ಅನಂತರ ಅದಕ್ಕೊಂದು ವಿಧಿನಿಯಮವನ್ನು ನಿಶ್ಚಯಿಸಿದನು." (ಪವಿತ್ರ ಕುರ್‌ಆನ್, 25:2)

"ಅವನು (ಭೂಮಿಯನ್ನು ಅಸ್ತಿತ್ವಕ್ಕೆ ತಂದ ಬಳಿಕ) ಅದರ ಮೇಲೆ ಪರ್ವತಗಳನ್ನು ನಾಟಿದನು. ಅದರಲ್ಲಿ ಸಮೃದ್ಧಿಗಳನ್ನಿರಿಸಿದನು ಮತ್ತು ಅದರಲ್ಲಿ ಎಲ್ಲ ಅಪೇಕ್ಷಕರಿಗಾಗಿ ಅವರವರ ಅಗತ್ಯಾನುಸಾರ ಸರಿಯಾದ ಪ್ರಮಾಣದಲ್ಲಿ ಆಹಾರ ವಸ್ತುಗಳನ್ನು ಒದಗಿಸಿದನು."

(ಪವಿತ್ರ ಕುರ್‌ಆನ್, 41:10)

"ಅವನು ಭೂಮಿಯನ್ನು ಸಕಲ ಸೃಷ್ಟಿಗಳಿಗಾಗಿ ಉಂಟು ಮಾಡಿದನು."

(ಪವಿತ್ರ ಕುರ್‌ಆನ್, 55:10)

"ಭೂಮಿಯಲ್ಲಿರುವುದನ್ನೆಲ್ಲ ನಿಮಗಾಗಿಯೇ ಸೃಷ್ಟಿಸಿದವನು ಆತನೇ."

(ಪವಿತ್ರ ಕುರ್‌ಆನ್, 2:29)

ದೇವನು ಕೇವಲ ಮುಸ್ಲಿಮರ ಸೃಷ್ಟಿಕರ್ತನಲ್ಲ, ಸಕಲ ಮಾನವರ ಕರ್ತನಾಗಿದ್ದಾನೆ. ಎಲ್ಲರಿಗೂ ಬಹಳ ನಿಕಟನಾಗಿದ್ದಾನೆ. "ನಾವು ಮಾನವನನ್ನು ಸೃಷ್ಟಿಸಿದ್ದೇವೆ ಮತ್ತು ನಾವು ಅವನ ಮನಸ್ಸಿನಲ್ಲಿ ಉದ್ಭವಿಸುವ ದುರ್ಭಾವನೆಗಳನ್ನೂ ಬಲ್ಲೆವು. ನಾವು ಅವನ ಕಂಠನಾಡಿಗಿಂತಲೂ ಅವನಿಗೆ ಸಮೀಪವಿದ್ದೇವೆ." (ಪವಿತ್ರ ಕುರ್‌ಆನ್, 50:16)

## ಮಾನವ ಏಕತೆ

ಜಗತ್ತಿನ ಸಕಲ ಮಾನವರೂ ಒಬ್ಬನೇ ದೇವನ ಸೃಷ್ಟಿಗಳಾಗಿದ್ದಾರೆ. ಆತನ ಗಾಳಿಯನ್ನ ಸೇವಿಸುವವರು ಮತ್ತು ಆತನ ನೀರನ್ನೇ ಕುಡಿಯುವವರಾಗಿದ್ದಾರೆ. ಭೂಮಿಯಲ್ಲಿ ಆತನ ಒದಗಿಸಿದ ಸೌಲಭ್ಯಗಳನ್ನು ಬಳಸಿ ಬಾಳುವವರಾಗಿದ್ದಾರೆ.

ಭೂಮಿಯಲ್ಲಿರುವ ಸಕಲ ಮಾನವರನ್ನು ಒಂದೇ ಆತ್ಮದಿಂದ ಸೃಷ್ಟಿಸಲಾಗಿದೆ. ಪವಿ ಕುರ್‌ಆನ್ ಹೀಗೆ ಹೇಳುತ್ತದೆ: **"ಜನರೇ, ನೀವು ನಿಮ್ಮ ಪಾಲಕ ಪ್ರಭುವನ್ನು ಭಯಪಡಿ ಅವನು ನಿಮ್ಮನ್ನು ಒಂದು ಜೀವದಿಂದ ಸೃಷ್ಟಿಸಿದನು. ಅದೇ ಜೀವದಿಂದ ಅದರ ಜೋಡಿಯನ್ನ ಉಂಟು ಮಾಡಿದನು ಮತ್ತು ಅವೆರಡರಿಂದ ಅನೇಕಾನೇಕ ಸ್ತ್ರೀ-ಪುರುಷರನ್ನು ಲೋಕದ ಹಬ್ಬಿಸಿದನು." (ಪವಿತ್ರ ಕುರ್‌ಆನ್, 4:1**

ಹಿಂದುಗಳು, ಮುಸ್ಲಿಮರು, ಕ್ರೈಸ್ತರು, ಭಾರತೀಯರು, ಚೀನೀಯರು, ಅರಬರು ಐರೋಪ್ಯರೆಲ್ಲರ ಆದಿಪಿತ ಆದಮ್ ಆಗಿದ್ದು ಎಲ್ಲರೂ ಅವರ ಸಂತಾನ ಪರಂಪರೆ ಸೇರಿದ್ದಾರೆ.

**"ಜನರೇ, ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಓರ್ವ ಸ್ತ್ರೀಯಿಂದ ಉಂಟ ಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯಪಡಲಿಕ್ಕಾಗಿ ನಿಮ್ಮ ಜನಾಂಗಗಳನು ಗೋತ್ರಗಳನ್ನೂ ಮಾಡಿದೆವು." (ಪವಿತ್ರ ಕುರ್‌ಆನ್, 49:13)**

ಆದ್ದರಿಂದ, ಜಗತ್ತಿನ ಮಾನವರೆಲ್ಲರ ಜಾತಿ ಒಂದೇ ಆಗಿದೆ. ಎಲ್ಲರೂ ಒಂದೆ ವರ್ಗದವರು, ಒಂದೇ ಕುಟುಂಬಕ್ಕೆ ಸೇರಿದವರು. ಪ್ರವಾದಿ(ಸ) ಹೇಳಿದ್ದಾರೆ: "ಸೃ ಗಳೆಲ್ಲವೂ ದೇವನ ಆಶ್ರಿತವಾಗಿವೆ. ಆದ್ದರಿಂದ, ತನ್ನ ಆಶ್ರಿತರಿಗೆ ಅತ್ಯಧಿಕ ಉಪಕಾರಿಯಾಗ ವವರೇ ಆತನಿಗೆ ಅತ್ಯಂತ ಪ್ರಿಯರು." **(ಬಝ್ಝಾರ್)**

ಪ್ರವಾದಿಯವರು ಇನ್ನೊಂದು ಸಂದರ್ಭದಲ್ಲಿ ಹೀಗೆಂದಿದ್ದರು: "ನಿಶ್ಚಯವಾಗಿಯೂ ನಿಮ್ಮ ದೇವನು ಏಕನು. ನಿಮ್ಮೆಲ್ಲರ ತಂದೆ ಒಬ್ಬರೇ. ಎಲ್ಲರೂ ಆದಮ್‌ರಿಂದ ಬಂದಿದ್ದಾರೆ ಆದಮರಾದರೋ ಮಣ್ಣಿನಿಂದ ಸೃಷ್ಟಿಸಲ್ಪಟ್ಟವರು. ಆದ್ದರಿಂದ ಅರಬನಿಗೆ ಅರಬೇತರನಿಗಿಂತ ಬಿಳಿಯನಿಗೆ ಕರಿಯನಿಗಿಂತ ಯಾವುದೇ ಶ್ರೇಷ್ಠತೆಯಿಲ್ಲ, ದೇವಭಕ್ತಿಯ ಆಧಾರದಲ್ಲಿ ಹೊರತು." **(ಮುಸ್ಲಿಮ್, ಅಬೂ ದಾವೂದ್)**

## ಧರ್ಮಗಳ ಏಕತೆ

ಧರ್ಮವು, ಮಾನವ ಜನಾಂಗದ ದೇವನಿರ್ಣಿತ ಜೀವನ ಪದ್ಧತಿಯಾಗಿದೆ. ಎಲ್ಲ ಧರ್ಮಗಳ ಮೂಲ ಒಂದೇ. ದೇವದತ್ತ ಜೀವನ ಪದ್ಧತಿ ಲಭಿಸದ ಜನಾಂಗಗಳಿಲ್ಲವೆಂದು ಪವಿತ್ರ ಕುರ್‌ಆನ್ ಒತ್ತಿ ಹೇಳಿದೆ.

"ನಾವು ನಿಮ್ಮ (ಮಾನವರ) ಪೈಕಿ ಪ್ರತಿಯೊಬ್ಬನಿಗೆ ಒಂದು ಧರ್ಮಶಾಸ್ತ್ರ ಮತ್ತು ರ್ಮಮಾರ್ಗವನ್ನು ನಿಶ್ಚಯಿಸಿದೆವು." (ಪವಿತ್ರ ಕುರ್‌ಆನ್, 5:48)

ಎಲ್ಲ ಧರ್ಮಗಳ ಬುನಾದಿ ಒಂದೇ. ಭಿನ್ನತೆ ಅನಂತರ ಹುಟ್ಟಿಕೊಂಡಿತು. ಅದಕ್ಕೆ ರೋಹಿತರ ಹಸ್ತಕ್ಷೇಪವೇ ಕಾರಣ. ವಿವಿಧ ಪ್ರವಾದಿಗಳ ಮೂಲಕ ಅವತೀರ್ಣಗೊಂಡ ಂದೇಶ ಒಂದೇ ಆಗಿತ್ತೆಂದು ಅಲ್ಲಾಹನು ಕುರ್‌ಆನಿನಲ್ಲಿ ಸ್ಪಷ್ಟಪಡಿಸಿದ್ದಾನೆ:

"ಅವನು ನೂಹರಿಗೆ ಆಜ್ಞಾಪಿಸಿದ್ದ ಧರ್ಮ ವಿಧಾನವನ್ನೇ ನಿಮಗಾಗಿಯೂ ನಿಶ್ಚಯಿಸಿ ಇಟ್ಟಿದ್ದಾನೆ. ಮತ್ತು (ಮುಹಮ್ಮದರೇ) ಈಗ ನಾವು ಅದನ್ನೇ ದಿವ್ಯವಾಣಿಯ ಮೂಲಕ ನಿಮ್ಮ ಡೆಗೆ ಕಳುಹಿಸಿರುತ್ತೇವೆ. ಇದನ್ನೇ ನಾವು ಇಬ್ರಾಹೀಮ್, ಮೂಸಾ ಮತ್ತು ಈಸಾರಿಗೂ ೋಧಿಸಿದ್ದೆವು." (ಪವಿತ್ರ ಕುರ್‌ಆನ್, 42:13)

ಒಟ್ಟಿನಲ್ಲಿ ಧರ್ಮಗಳ ಅವತರಣ ಹಂತದಲ್ಲಿ ಅವೆಲ್ಲವುಗಳ ಮೂಲಭೂತ ಬೋಧನೆ ಳು ಒಂದೇ ಆಗಿದ್ದುವು. ಕೆಲವು ವಿವರಣೆ ಮತ್ತು ಆಚಾರ-ಅನುಷ್ಠಾನಗಳಲ್ಲಿ ಮಾತ್ರ ಾಲ, ದೇಶಗಳಿಗೆ ತಕ್ಕಂಥ ಬದಲಾವಣೆಗಳಿದ್ದುವು. ಧರ್ಮಗಳಲ್ಲಿರುವ ಮೂಲಭೂತ ನ್ನತೆಗಳು ಮಾನವರ ಹಸ್ತಕ್ಷೇಪದಿಂದ ಉಂಟಾಗಿವೆ.

## ೇವ ಪ್ರವಾದಿಗಳು

ದೇವ ಪ್ರವಾದಿಗಳು ಮಾನವಕುಲಕ್ಕೆ ದೈವಿಕ ಜೀವನ ಪದ್ಧತಿಯನ್ನು ತಲಪಿಸಿದವ ಾಗಿದ್ದಾರೆ. ಜಗತ್ತಿನ ಎಲ್ಲ ಜನಾಂಗ ಮತ್ತು ದೇಶಗಳಲ್ಲಿ ಇಂಥ ದೇವ ಪ್ರವಾದಿಗಳನ್ನು ೇಮಿಸಲಾಗಿತ್ತೆಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿದೆ.

"ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕನನ್ನು ಕಳುಹಿ ಿದೆವು." (ಪವಿತ್ರ ಕುರ್‌ಆನ್, 16:36)

ಪ್ರವಾದಿ ಮುಹಮ್ಮದ್‌ರು(ಸ), ದೇವದತ್ತವಾದ ಜೀವನ ಮಾರ್ಗವನ್ನು ಅನುಸರಿಸು ವವರಿಗೆ ಶುಭವಾರ್ತೆ ಮತ್ತು ಅದನ್ನು ನಿರಾಕರಿಸುವವರಿಗೆ ಎಚ್ಚರಿಕೆ ನೀಡುವ ಪ್ರವಾದಿ ಶೃಂಖಲೆಯ ಕೊನೆಯ ಕೊಂಡಿಯಾಗಿದ್ದಾರೆ. ಅಲ್ಲಾಹನು ತಿಳಿಸಿರುವನು:

"ನೀವು ಕೇವಲ ಓರ್ವ ಎಚ್ಚರಿಕೆ ಕೊಡುವವರಾಗಿರುತ್ತೀರಿ. ನಾವು ನಿಮ್ಮನ್ನು ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರಾಗಿ ಸತ್ಯಸಹಿತ ಕಳುಹಿಸಿರುತ್ತೇವೆ. ಎಚ್ಚರಿಕೆ ಕೊಡುವವರಾರೂ ಬಂದಿರದಂತಹ ಸಮುದಾಯವೊಂದೂ ಗತಿಸಿಲ್ಲ." (ಪವಿತ್ರ ಕುರ್‌ಆನ್, 35:23-24)

ಆದ್ದರಿಂದ ಪ್ರವಾದಿಗಳೆಲ್ಲರೂ ಪರಸ್ಪರ ಸಹೋದರರು. ದೇವಸಂದೇಶವಾಹಕರೆಂಬ ನೆಲೆಯಲ್ಲಿ ಎಲ್ಲರೂ ಸಮಾನರು ಮತ್ತು ಸಮಾನ ಗೌರವಕ್ಕೆ ಅರ್ಹರು. ಜಗತ್ತಿನಲ್ಲಿ ನೇಮಕ ಗೊಂಡ ಎಲ್ಲ ಪ್ರವಾದಿಗಳ ಮೇಲೆಯೂ ವಿಶ್ವಾಸವಿರಿಸಬೇಕಾದುದು ಮುಸ್ಲಿಮರ ಹೊಣೆ

ಯಾಗಿದೆ. ಅವರೆಲ್ಲರನ್ನೂ ಅಂಗೀಕರಿಸಿ ಗೌರವಿಸಬೇಕು. ಕುರ್‌ಆನಿನಲ್ಲಿ ಅಲ್ಲಾಹ
ಆಜ್ಞಾಪಿಸಿರುತ್ತಾನೆ-

**"ಮುಸ್ಲಿಮರೇ ಹೇಳಿರಿ, ನಾವು ಅಲ್ಲಾಹನ ಮೇಲೆ ಹಾಗೂ ನಮ್ಮ ಕಡೆ ಅವತೀರ್ಣವಾಗಿರುವುದರ ಮೇಲೆ ಮತ್ತು ಇಬ್‌ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ ಮತ್ತು ಯಅ್‌ಕೂಬರ ಸಂತತಿಗಳಿಗೆ ಅವತೀರ್ಣವಾಗಿರುವುದರ ಮೇಲೆ ಹಾಗೂ ಮೂಸಾ ಈಸಾ ಮತ್ತು ಇತರ ಎಲ್ಲ ಪ್ರವಾದಿಗಳಿಗೆ ಅವರ ಪ್ರಭುವಿನಿಂದ ದೊರೆತಿರುವುದರ ಮೇಲೆ ವಿಶ್ವಾಸವಿಟ್ಟಿದ್ದೇವೆ. ನಾವು ಅವರೊಳಗೆ ತಾರತಮ್ಯವೆಸಗುವುದಿಲ್ಲ. ನಾವು ಕೇವಲ ಅಲ್ಲಾಹನ ಮುಸ್ಲಿಮರಾಗಿದ್ದೇವೆ." (ಪವಿತ್ರ ಕುರ್‌ಆನ್, 2:136**

## ಏಕ ಸಮುದಾಯ

ಆರಂಭದಲ್ಲಿ ಮಾನವರಾಶಿಯು ಒಂದೇ ಸಮುದಾಯವಾಗಿತ್ತು. ಕಾಲಕ್ರಮೇಣ ಪರಸ್ಪರ ವಿಂಗಡನೆಗೊಂಡು ದೂರವಾದುವು. ಮಾನವರು ಸ್ವಯಂಕೃತ ನೀತಿ ಮತ್ತು ಜೀವನ ರೀತಿಗಳನ್ನು ಅವಲಂಬಿಸಿದ್ದೇ ಅದಕ್ಕೆ ಕಾರಣ. ಪವಿತ್ರ ಕುರ್‌ಆನ್ ಹೇಳಿದೆ:

**"ಆರಂಭದಲ್ಲಿ ಮಾನವರೆಲ್ಲರೂ ಒಂದೇ ಸಮುದಾಯವಾಗಿದ್ದರು. ಅನಂತರ ಅವರು ವಿವಿಧ ತತ್ವಾದರ್ಶಗಳನ್ನು ಉಂಟು ಮಾಡಿಕೊಂಡರು." (ಪವಿತ್ರ ಕುರ್‌ಆನ್, 10:19)**

ಭಿನ್ನತೆಯನ್ನು ನಿವಾರಿಸಿ ಐಕ್ಯದ ಪುನರ್‌ಸ್ಥಾಪನೆಗಾಗಿ ದೇವನು ತನ್ನ ಪ್ರವಾದಿಗಳನ್ನು ನೇಮಿಸಿದ್ದನು.

**"ಆರಂಭದಲ್ಲಿ ಜನರೆಲ್ಲರೂ ಒಂದೇ ಸಂಪ್ರದಾಯದವರಾಗಿದ್ದರು. (ಈ ಸ್ಥಿತಿ ಬಹುಕಾಲ ಉಳಿಯಲಿಲ್ಲ. ಅವರೊಳಗೆ ಭಿನ್ನಾಭಿಪ್ರಾಯಗಳುಂಟಾದುವು) ಆಗ ಅಲ್ಲಾಹನು ಸತ್ಯ ಮಾರ್ಗದ ಬಗ್ಗೆ ಸುವಾರ್ತೆ ನೀಡುವವರೂ ಮಿಥ್ಯಮಾರ್ಗದ ಬಗ್ಗೆ ಎಚ್ಚರಿಕೆ ಕೊಡುವವರು ಆದ ಪ್ರವಾದಿಗಳನ್ನು ರವಾನಿಸಿದನು ಮತ್ತು ಅವರೊಂದಿಗೆ, ಸತ್ಯದ ವಿಷಯದಲ್ಲಿ ಜನರಲ್ಲುಂಟಾಗಿದ್ದ ಭಿನ್ನಾಭಿಪ್ರಾಯಗಳ ಬಗ್ಗೆ ತೀರ್ಪು ನೀಡಲಿಕ್ಕಾಗಿ ಪರಮಸತ್ಯ ಗ್ರಂಥವನ್ನು ಇಳಿಸಿದನು." (ಪವಿತ್ರ ಕುರ್‌ಆನ್, 2:213)**

ಆದರೆ ದೇವ ಪ್ರವಾದಿಗಳು ಬಂದಾಗ ಸಮಾಜವು ಅವರನ್ನು ನಿರಾಕರಿಸಿತು ಹಠದಿಂದ ಪೂರ್ವಜರ ಆಚಾರಗಳನ್ನೇ ಅನುಸರಿಸಿತು. ಇದರಿಂದಾಗಿ ಭಿನ್ನತೆ ನಿವಾರಣೆಯಾಗದೆ ನಿರಂತರ ಮುಂದುವರಿಯಿತು. ಆದ್ದರಿಂದ ಮಾನವರೆಲ್ಲರೂ ಮೂಲಭೂತವಾಗಿ ಒಂದೇ ಸಮುದಾಯದ ಸದಸ್ಯರಾಗಿದ್ದಾರೆ. ಆ ಪ್ರಕಾರ ಬಾಳಬೇಕಾದವರಾಗಿದ್ದಾರೆ.

## ಗೌರವಾರ್ಹತೆ

ಇಸ್ಲಾಮಿನ ದೃಷ್ಟಿಯಲ್ಲಿ, ಮಾನವನು ಜಗತ್ತಿನ ಅತಿ ಶ್ರೇಷ್ಠ ಸೃಷ್ಟಿ, ಆತನ ಕುಟುಂಬ

ತಿ, ವರ್ಗ, ವರ್ಣ, ದೇಶ, ಭಾಷೆ ಇತ್ಯಾದಿ ಏನಾಗಿದ್ದರೂ ಸರಿ. ಜನ್ಮತಃ ಆತನು ರವಾರ್ಹನು. ಅಲ್ಲಾಹನು ಹೇಳಿದ್ದಾನೆ:

**"ನಾವು ಆದಮರ ಸಂತತಿಗೆ ಶ್ರೇಷ್ಠತೆಯನ್ನು ಪ್ರದಾನ ಮಾಡಿದ್ದುದೂ ಅವರಿಗೆ ನೆಲ, ಲಗಳಲ್ಲಿ ಯಾನಗಳನ್ನು ದಯ ಪಾಲಿಸಿದ್ದುದೂ ಅವರಿಗೆ ಶುದ್ಧ ವಸ್ತುಗಳಿಂದ ಜೀವನಾಧಾರ ಡಿದ್ದುದೂ ನಮ್ಮ ಅನೇಕ ಸೃಷ್ಟಿಗಳ ಮೇಲೆ ಉತ್ಕೃಷ್ಟತೆ ಕೊಡ ಮಾಡಿದುದೂ ನಮ್ಮ ನುಗ್ರಹವಾಗಿದೆ."** **(ಪವಿತ್ರ ಕುರ್‌ಆನ್, 17:70)**

ಆದ್ದರಿಂದ ಮೂಲಭೂತವಾಗಿ ಎಲ್ಲ ಮಾನವರೂ ವಿಶಿಷ್ಟ ಮತ್ತು ಶುದ್ಧ ಪ್ರಕೃತಿಯ ರಾಗಿದ್ದಾರೆ. ಪವಿತ್ರ ಕುರ್‌ಆನ್ ಹೀಗೆಂದಿದೆ:

**"ನಾವು ಮಾನವನನ್ನು ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಿರುತ್ತೇವೆ."**

**(ಪವಿತ್ರ ಕುರ್‌ಆನ್, 95:4)**

ಪ್ರವಾದಿಯವರು ಹೇಳಿದ್ದಾರೆ: "ಎಲ್ಲ ಮಕ್ಕಳೂ ಶುದ್ಧ ಪ್ರಕೃತಿಯಲ್ಲಿ ಜನಿಸುತ್ತವೆ."

ಆದ್ದರಿಂದ, ಒಬ್ಬನೇ ದೇವನ ಸೃಷ್ಟಿಗಳು ಮತ್ತು ಒಂದೇ ತಂದೆ ತಾಯಿಯ ಮಕ್ಕಳಾ ರುವ ಮಾನವರೆಲ್ಲರೂ ಮೂಲಭೂತವಾಗಿ ನಿಷ್ಕಳಂಕರೂ ಗೌರವಾರ್ಹರೂ ಆಗಿದ್ದಾರೆ. ರುವಾಯ ತಮ್ಮ ದುಷ್ಕೃತ್ಯಗಳಿಂದಾಗಿ ಅವರು ಸ್ವಯಂ ಅಪರಾಧಿಗಳೂ ಹೀನರೂ ಗುತ್ತಾರೆ. ಅವುಗಳೇ ಅವರನ್ನು ಕೆಡಿಸಿ ಹಾಳು ಮಾಡುತ್ತವೆ. ಅಲ್ಲಾಹನು ತಿಳಿಸಿದ್ದಾನೆ:

**"ತರುವಾಯ ನಾವು ಅವನನ್ನು ಪಲ್ಲಟಗೊಳಿಸಿ, ನೀಚರಲ್ಲಿ ಅತ್ಯಂತ ನೀಚನಾಗಿ ಮಾಡಿದೆವು. ಆದರೆ, ವಿಶ್ವಾಸವಿರಿಸಿಕೊಂಡ ಮತ್ತು ಸತ್ಕರ್ಮವೆಸಗುತ್ತಿದ್ದವರ ಹೊರತು- ವರಿಗೆ ಎಂದೂ ಮುಗಿಯದಂತಹ ಸತ್ಫಲವಿದೆ."** **(ಪವಿತ್ರ ಕುರ್‌ಆನ್, 95:5-6)**

ಧಾರ್ಮಿಕ ವಿಶ್ವಾಸ ಭೇದವಿಲ್ಲದೆ ಮಾನವನನ್ನು ಗೌರವಿಸಬೇಕೆಂದು ಇಸ್ಲಾಮ್ ಜ್ಞಾಪಿಸಿದೆ. ಒಮ್ಮೆ ಒಂದು ಮೃತದೇಹವನ್ನು ಸಾಗಿಸುತ್ತಿರುವುದನ್ನು ನೋಡಿದ ಪ್ರವಾದಿ ವರ್ಯರು(ಸ) ಎದ್ದು ನಿಂತರು. ಆಗ ಅನುಯಾಯಿಗಳು ಅವರಿಗೆ ಅದೊಂದು ಯಹೂದಿಯ ಮೃತದೇಹವೆಂದು ತಿಳಿಸಿದರು. ತಕ್ಷಣ ಪ್ರವಾದಿಯವರು(ಸ) ಅವರೂ ಮಾನವರಲ್ಲವೇ? ಎಂದು ಕೇಳಿದರು.

ಹಾಗೆಯೇ ಧಾರ್ಮಿಕ ಭಿನ್ನತೆಯು ಪರಸ್ಪರ ಅಕ್ರಮಗಳಿಗೆ ಹೇತುವಾಗಬಾರದು. ಸತ್ಕಾರ್ಯಗಳಲ್ಲಿ ಮತ್ತು ಕೆಡುಕಿನ ಉಚ್ಚಾಟನೆಯಲ್ಲಿ ವಿಶ್ವಾಸ ಭೇದವಿಲ್ಲದೆ ಪರಸ್ಪರ ಸಹಾಯ ಸಹಕಾರ ನೀಡಬೇಕು. ಅಲ್ಲಾಹನು ಹೀಗೆ ಆದೇಶಿಸಿದ್ದಾನೆ:

**"ಪುಣ್ಯ ಹಾಗೂ ದೇವಭಯದ ಕಾರ್ಯಗಳಲ್ಲಿ ಎಲ್ಲರ ಜೊತೆ ಸಹಕರಿಸಿರಿ ಮತ್ತು ಪಾಪ ಹಾಗೂ ಅತಿರೇಕ ಕಾರ್ಯಗಳಲ್ಲಿ ಯಾರೊಂದಿಗೂ ಸಹಕರಿಸಬೇಡಿರಿ."**

**(ಪವಿತ್ರ ಕುರ್‌ಆನ್, 5:2)**

# ವಿಶ್ವಾಸ ಸ್ವಾತಂತ್ರ್ಯ

ಇಸ್ಲಾಮ್, ದೇವದತ್ತ ಜೀವನ ಪದ್ಧತಿಯಾಗಿದೆ. ಅದಕ್ಕೆ ಸ್ಪಷ್ಟವಾದ ವಿಶ್ವಾ ಸಂಹಿತೆಯಿದೆ. ಅದರಿಂದಲೇ ಇಸ್ಲಾಮಿನ ಆಚಾರ-ಕರ್ಮಗಳ ರೀತಿಗಳು ರೂಪುಗೊಳ್ಳುತ್ತವ ವಿಶ್ವಾಸ ಶ್ರದ್ಧೆಗಳನ್ನು ಮಾನವ ಮನಸ್ಸುಗಳು ಅಂಗೀಕರಿಸಬೇಕು. ಅನ್ಯಥಾ ನಾಲಗೆಯಿಂ ಹೊರಡಿಸುವ ಘೋಷಣೆಗಳು ನಿರರ್ಥಕ ಮತ್ತು ನಿಷ್ಫಲವಾಗುತ್ತವೆ. ಆದ್ದರಿಂದಲೇ, ಇಸ್ಲಾಮ ಮಾನವ ಮನಸ್ಸುಗಳ ಸುಧಾರಣೆಗೆ ಹೆಚ್ಚು ಒತ್ತು ನೀಡಿದೆ. ಸಿದ್ಧಾಂತಗಳ ಅಂಗೀಕಾರ ವ್ಯಕ್ತಿಗಳ ಇಷ್ಟಾನಿಷ್ಟಗಳಿಗೆ ಸಂಬಂಧಿಸಿದೆ. ಅವುಗಳನ್ನು ಯಾರ ಮೇಲೆಯೂ ಹೇರಲ ಸಾಧ್ಯವಿಲ್ಲ. ಈ ವಿಷಯದಲ್ಲಿ ಇಸ್ಲಾಮ್ ಬಹಳ ವಿಶಾಲ ಮತ್ತು ಸಹಿಷ್ಣುತೆಯ ಧೋರಣೆಯನ್ನು ಅಂಗೀಕರಿಸಿದೆ. ವಾಸ್ತವಿಕತೆಗಳನ್ನು ಮಾನವ ಮನಸ್ಸುಗಳ ಮುಂ ಸ್ಪಷ್ಟವಾಗಿ ವಿವರಿಸಿದ ಬಳಿಕ, ಅವುಗಳಲ್ಲಿ ವಿಶ್ವಾಸವಿರಿಸುವ ಅಥವಾ ವಿಶ್ವಾಸವಿರಿಸದಿರುವ ಅಂಗೀಕರಿಸುವ ಅಥವಾ ನಿರಾಕರಿಸುವ ಅನುಮತಿ ಮತ್ತು ಸ್ವಾತಂತ್ರ್ಯವನ್ನು ವ್ಯಕ್ತಿಗಳಿ ಅದು ನೀಡುತ್ತದೆ. ಇಸ್ಲಾಮನ್ನು ಅಂಗೀಕರಿಸುವಂತೆ ಅದು ಯಾರನ್ನೂ ಬಲಾತ್ಕರಿಸ ವುದಿಲ್ಲ. ಪವಿತ್ರ ಕುರ್‌ಆನ್ ಸುಸ್ಪಷ್ಟವಾಗಿ ಹೀಗೆ ಸಾರಿದೆ:

**"ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ ಬಲಾತ್ಕಾರಗಳಿಲ್ಲ. ಸನ್ಮಾರ್ಗವ ದುರ್ಮಾರ್ಗದಿಂದ ಬೇರ್ಪಡಿಸಲ್ಪಟ್ಟಿದೆ."** **(ಪವಿತ್ರ ಕುರ್‌ಆನ್, 2:256)**

**"ಸ್ಪಷ್ಟವಾಗಿ (ಹೀಗೆ) ಹೇಳಿಬಿಡಿರಿ- ಇದು ನಿಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯ. ಇಷ್ಟವಿದ್ದವರು ಸ್ವೀಕರಿಸಿಕೊಳ್ಳಲಿ, ಇಷ್ಟವಿದ್ದವರು ನಿರಾಕರಿಸಲಿ."**

**(ಪವಿತ್ರ ಕುರ್‌ಆನ್, 18:29)**

ಧರ್ಮದ ಪ್ರಥಮ ಬೋಧಕರಾದ ಪ್ರವಾದಿಗಳೂ ದೇವಸಂದೇಶಗಳನ್ನು ತಲಪಿಸುವ ಹೊಣೆಯನ್ನು ಮಾತ್ರ ಹೊಂದಿದ್ದರು. ಅಲ್ಲಾಹನು ಹೇಳಿದ್ದಾನೆ:

**"ವಿಷಯಗಳನ್ನು ಸುಸ್ಪಷ್ಟವಾಗಿ ತಲುಪಿಸುವ ಹೊರತು ಬೇರಾವ ಹೊಣೆಗಾರಿಕೆ ಯಾದರೂ ಸಂದೇಶವಾಹಕರ ಮೇಲೆ ಇದೆಯೇ?"** **(ಪವಿತ್ರ ಕುರ್‌ಆನ್, 16:35)**

ಅಂತಿಮ ಪ್ರವಾದಿ ಮುಹಮ್ಮದ್‌ರಿಗೂ(ಸ) ಅದರ ಹೊರತು ಬೇರೆ ಹೊಣೆಗಾರಿಕೆ

ಯಿರಲಿಲ್ಲವೆಂದು ಕುರ್‌ಆನಿನ ವಿವಿಧೆಡೆಗಳಲ್ಲಿ ಸ್ಪಷ್ಟಪಡಿಸಲಾಗಿದೆ. ಪ್ರವಾದಿಯವರಿಗೆ(ಸ) ಅಲ್ಲಾಹನು ತಿಳಿಸಿರುತ್ತಾನೆ:

**"ಸಂದೇಶವಾಹಕರೇ, ನಾವು ನಿಮ್ಮನ್ನು ಇವರ ಕಾವಲುಗಾರನಾಗಿಯಂತು ಕಳುಹಿಸಿಲ್ಲ. ನಿಮ್ಮ ಮೇಲಂತೂ ವಿಷಯವನ್ನು ತಲುಪಿಸಿ ಬಿಡುವ ಹೊಣೆಗಾರಿಕೆ ಮಾತ್ರ ಇದೆ."**

**(ಪವಿತ್ರ ಕುರ್‌ಆನ್, 42:48)**

**"ನಮ್ಮ ಸಂದೇಶವಾಹಕರಿಗೆ ಸುಸ್ಪಷ್ಟ ಆಜ್ಞೆಗಳನ್ನು ತಲಪಿಸುವ ಹೊಣೆಗಾರಿಕೆ ಮಾತ್ರವಿತ್ತೆಂಬುದನ್ನು ಅರಿತುಕೊಳ್ಳಿರಿ." (ಪವಿತ್ರ ಕುರ್‌ಆನ್, 5:92)**

ಜನರನ್ನು ಬಲಾತ್ಕಾರದಿಂದ ವಿಶ್ವಾಸವಿರಿಸುವಂತೆ ಮಾಡುವ ಅನುಮತಿ ಪ್ರವಾದಿಯವರಿಗೂ ಇರಲಿಲ್ಲ. ಕುರ್‌ಆನ್ ಹೀಗೆ ಪ್ರಶ್ನಿಸಿದೆ:

**"ಹೀಗಿರುವಾಗ ಜನರೆಲ್ಲರೂ ಸತ್ಯವಿಶ್ವಾಸಿಗಳಾಗಬೇಕೆಂದು ನೀವು ಒತ್ತಾಯಪಡಿಸುವಿರಾ? ಯಾರೊಬ್ಬನೂ ಅಲ್ಲಾಹನ ಅನುಮತಿಯ ಹೊರತು ವಿಶ್ವಾಸವಿಡಲಾರನು."**

**(ಪವಿತ್ರ ಕುರ್‌ಆನ್, 10:99-100)**

**"ಸರಿ! (ಸಂದೇಶವಾಹಕರೇ) ನೀವು ಉಪದೇಶ ಮಾಡುತ್ತಾ ಸಾಗಿರಿ. ನೀವು ಕೇವಲ ಉಪದೇಶಕರು. ಅವರ ಮೇಲೇನೂ ಬಲಾತ್ಕಾರ ಮಾಡುವವರಲ್ಲ."**

**(ಪವಿತ್ರ ಕುರ್‌ಆನ್, 88:21-22)**

ಇಸ್ಲಾಮ್ ಈ ರೀತಿಯಲ್ಲಿ ವಿಶ್ವಾಸ ಸ್ವಾತಂತ್ರ್ಯವನ್ನು ಸಾರುತ್ತದೆ. ಧರ್ಮವನ್ನು ಯಾರ ಮೇಲೆಯೂ ಹೇರಬಾರದೆಂದು ಆಜ್ಞಾಪಿಸುತ್ತದೆ. ಪ್ರತಿಯೊಬ್ಬರಿಗೂ ಸ್ವಂತ ವಿಶ್ವಾಸ ಮತ್ತು ದೃಷ್ಟಿಕೋನವನ್ನು ಇರಿಸಿಕೊಳ್ಳುವ ಮತ್ತು ಆರಾಧನೆ- ಆಚಾರ ಕ್ರಮಗಳನ್ನು ನಡೆಸುವ ಸ್ವಾತಂತ್ರ್ಯವಿದೆ. ಅದರಲ್ಲಿ ಹಸ್ತಕ್ಷೇಪಿಸುವ ಅಥವಾ ತಡೆಯುವ ಅಧಿಕಾರ ಯಾರಿಗೂ ಇಲ್ಲ. ಇದರಲ್ಲಿ ವ್ಯಕ್ತಿ, ಸಮಾಜ, ಸರಕಾರ ಇತ್ಯಾದಿ ಎಲ್ಲರೂ ಸಮಾನರು.

ಇಸ್ಲಾಮಿ ಸರಕಾರವು ಪ್ರಜೆಗಳ ವಿಶ್ವಾಸದ ವಿಷಯದಲ್ಲಿ ಹಸ್ತಕ್ಷೇಪ ನಡೆಸುವುದಿಲ್ಲ. ಕುರ್‌ಆನ್ ನಿಷ್ಠುರವಾಗಿ ಆಜ್ಞಾಪಿಸಿರುವಂತೆ, ಅವರು ತಮಗಿಷ್ಟವಿರುವ ಧರ್ಮವನ್ನು ಅಂಗೀಕರಿಸಬಹುದಾಗಿದೆ. ಮದೀನಾದಲ್ಲಿ ಪ್ರವಾದಿವರ್ಯರ(ಸ) ನಾಯಕತ್ವದಲ್ಲಿ ಇಸ್ಲಾಮಿ ಸರಕಾರ ಸ್ಥಾಪನೆಯಾದ ಮೊದಲ್ಗೊಂಡು ಈ ವರೆಗಿನ ಅನುಭವಗಳು ಅದಕ್ಕೆ ಸಾಕ್ಷಿಯಾಗಿವೆ.

ಮದೀನಕ್ಕೆ ತಲಪಿದ ಪ್ರವಾದಿಯವರು(ಸ) ಮುಹಾಜಿರ್ ಮತ್ತು ಅನ್ಸಾರರೊಡನೆ ಒಪ್ಪಂದ ಮಾಡಿಕೊಂಡರು. ಅದರಲ್ಲಿ ಅಲ್ಲಿನ ಯಹೂದಿಯರೊಂದಿಗೆ ಕೆಲವು ನಿಬಂಧನೆಗಳನ್ನು ಸೂಚಿಸಿ ಅವರಿಗೆ ಕೆಲವು ವಾಗ್ದಾನಗಳನ್ನೂ ನೀಡಿದರು. ಅದು ಇಸ್ಲಾಮಿ ರಾಷ್ಟ್ರದಲ್ಲಿರುವ ಧಾರ್ಮಿಕ ಅಲ್ಪಸಂಖ್ಯಾತರ ಸ್ಥಾನ ಮತ್ತು ಹಕ್ಕು ಬಾಧ್ಯತೆಗಳನ್ನು ವಿವರವಾಗಿ ತಿಳಿಸುವ ಒಂದು ದಾಖಲೆಯಾಗಿತ್ತು. ಅದರಲ್ಲಿ ಪ್ರವಾದಿಯವರು ಧಾರ್ಮಿಕ ಅಲ್ಪ

ಸಂಖ್ಯಾತರಿಗೆ ನೀಡಿರುವಂಥ ಸ್ವಾತಂತ್ರ್ಯ ಮತ್ತು ಅನುಕೂಲತೆಗಳು ಜಗತ್ತಿನ ಯಾವುದೇ ಧರ್ಮಾಧಿಷ್ಠಿತ ಅಥವಾ ಧರ್ಮನಿರಪೇಕ್ಷ ರಾಷ್ಟ್ರಗಳಲ್ಲಿ ಕಾಣಿಸಲಾರದು. ಯಹೂದಿಯರಿಗೆ ಸಂಪೂರ್ಣ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡುವ ಆ ದಾಖಲೆಯಲ್ಲಿ ಹೀಗೆ ಹೇಳಲಾಗಿದೆ: "ನಮ್ಮ ಆಡಳಿತ ಸೀಮೆಯಲ್ಲಿರುವ ಯಹೂದಿಯರಿಗೆ ಕೋಮು ಪಕ್ಷಪಾತೀ ವರ್ತನೆ ಮತ್ತು ಶೋಷಣೆಗಳಿಂದ ಸಂರಕ್ಷಣೆ ನೀಡಲಾಗುವುದು. ನಮ್ಮ ಸಹಾಯ, ಸಹಕಾರ, ಸಹಾನುಭೂತಿಯ ಸಂರಕ್ಷಣೆಗಳಲ್ಲಿ ಸ್ವಸಮುದಾಯದವರಂತೆಯೇ ಅವರಿಗೂ ಹಕ್ಕಿರು ವುದು. ಅವರು ಮುಸ್ಲಿಮರ ಜತೆಗೂಡಿ ಏಕ ವ್ಯವಸ್ಥೆಯ ಒಂದೇ ರಾಷ್ಟ್ರವಾಗುವರು. ಮುಸ್ಲಿಮರಂತೆ ಅವರಿಗೂ ತಮ್ಮ ಧರ್ಮವನ್ನು ಸ್ವತಂತ್ರವಾಗಿ ಆಚರಿಸಬಹುದಾಗಿದೆ."

ಅನಂತರ ಇಸ್ಲಾಮೀ ರಾಷ್ಟ್ರದ ನಾಶಕ್ಕಾಗಿ ಅವರು ಒಳಸಂಚು ನಡೆಸಿದಾಗ ಪ್ರವಾದಿಯವರಿಗೆ ಅವರನ್ನು ಗಡೀಪಾರು ಮಾಡಬೇಕಾಯಿತು. ಇದಕ್ಕೆ ಅವರ ಧಾರ್ಮಿಕ ಭಿನ್ನತೆಯು ಪ್ರೇರಕವಾಗಿರಲಿಲ್ಲ. ಬದಲಾಗಿ ರಾಜಕೀಯ ಕಾರಣಗಳಾಗಿದ್ದುವು. ಈ ವಿಷಯ ವನ್ನು ವಿಲಿಯಮ್ ಮ್ಯೂರ್ (Muir) ಕೂಡಾ ಒಪ್ಪಿದ್ದಾರೆ. ಅವರು ಹೀಗೆ ಬರೆದಿದ್ದಾರೆ: "ಮುಹಮ್ಮದ್, ಅವರ ವಿರುದ್ಧ (ಬನೂ ಕುರೈಝಾ ಎಂಬ ಯಹೂದಿ ಗೋತ್ರ) ಕ್ರಮ ಕೈಗೊಂಡಿರುವುದಕ್ಕೆ ರಾಜಕೀಯವೇ ಪ್ರಮುಖ ಕಾರಣವಾಗಿತ್ತು. ಅವರನ್ನು ಇಸ್ಲಾಮ್ ಸ್ವೀಕರಿಸುವಂತೆ ಒತ್ತಾಯಿಸಿರಲಿಲ್ಲ ಅಥವಾ ಅದಕ್ಕಾಗಿ ಅವರನ್ನು ದಂಡಿಸಿರಲಿಲ್ಲ."

**(ಸಂಪುಟ:3, ಪುಟ:282)**

ಯಹೂದಿಯರಂತೆಯೇ ಕ್ರೈಸ್ತ ಗೋತ್ರಗಳೊಡನೆಯೂ ಪ್ರವಾದಿಯವರು(ಸ) ಒಪ್ಪಂದ ಮಾಡಿದ್ದರು. ಆ ಪ್ರಕಾರ ಅವರಿಗೆ ಇಸ್ಲಾಮೀ ರಾಷ್ಟ್ರದಲ್ಲಿ ಸಂಪೂರ್ಣ ವಿಶ್ವಾಸ ಸ್ವಾತಂತ್ರ್ಯ ವನ್ನು ನೀಡಲಾಗಿತ್ತು. ಸರ್ ಥಾಮಸ್ ಆರ್ನಾಲ್ಡ್ ಹೀಗೆ ಬರೆದಿದ್ದಾರೆ- "ಮುಹಮ್ಮದ್‌ರು ಹಲವು ಅರಬ್ ಕ್ರೈಸ್ತ ಗೋತ್ರಗಳೊಡನೆ ಒಪ್ಪಂದ ಮಾಡಿಕೊಂಡಿದ್ದರು. ಅವರಿಗೆ ಭದ್ರತೆ ಯನ್ನೂ ಸ್ವಧರ್ಮಾಚರಣೆಯ ಸ್ವಾತಂತ್ರ್ಯವನ್ನೂ ನೀಡಿದ್ದರು. ಅವರ ಪುರೋಹಿತರ ವಿಶೇಷಾ ಧಿಕಾರಗಳನ್ನು ಯಥಾವತ್ತಾಗಿ ಉಳಿಸಿಕೊಂಡರು." **(ಸಂಪುಟ:3, ಪುಟ:282)**

ಪ್ರವಾದಿವರ್ಯರ(ಸ) ಉತ್ತರಾಧಿಕಾರಿಗಳೂ ಅವರ ಸಹಿಷ್ಣುತೆಯ ಧೋರಣೆಯನ್ನು ಯಥಾ ರೀತಿ ಅವಲಂಬಿಸಿದ್ದರು. ದ್ವಿತೀಯ ಖಲೀಫ ಉಮರ್ ಫಾರೂಕ್ ಈಲಿಯಾ ನಿವಾಸಿಗಳಿಗೆ ಬರೆದು ಕೊಟ್ಟ ಭದ್ರತಾ ಕರಾರುಗಳಲ್ಲಿ ಹೀಗೆ ಹೇಳಲಾಗಿತ್ತು:

"ಇದು ದೇವನ ದಾಸ ಮತ್ತು ವಿಶ್ವಾಸಿಗಳ ನಾಯಕನಾಗಿರುವ ಉಮರ್, ಈಲಿಯಾದ ಜನರಿಗೆ ಬರೆಯುವ ಕರಾರು ಪತ್ರವಾಗಿದೆ. ಎಲ್ಲರ ಪ್ರಾಣ, ಸೊತ್ತು, ಚರ್ಚ್, ಶಿಲುಬೆ ಹಾಗೂ ಧರ್ಮಕ್ಕೆ ಸಂಬಂಧಿಸಿದ ಎಲ್ಲದಕ್ಕೂ ಭದ್ರತೆಯನ್ನು ಒದಗಿಸಲಾಗುವುದು. ಯಾರ

ಚರ್ಚ್‌ಗಳನ್ನೂ ನಿವಾಸವಾಗಿ ಬಳಸಬಾರದು ಅಥವಾ ನಾಶಗೊಳಿಸಬಾರದು. ಅವು ಅಥವಾ ಅವುಗಳಿಗೆ ಸಂಬಂಧಿಸಿದ ಸೊತ್ತು ವಿತ್ತಗಳನ್ನು ಕಸಿಯಬಾರದು, ಹಾಗೆಯೇ ಅವರ ಸೊತ್ತು ಅಥವಾ ಶಿಲುಬೆಗಳನ್ನು ಸ್ವಾಧೀನಪಡಿಸಬಾರದು. ವಿಶ್ವಾಸದ ವಿಷಯದಲ್ಲಿ ಯಾರನ್ನೂ ಅಡ್ಡಿಪಡಿಸಬಾರದು, ಮತಾಂತರಕ್ಕೆ ಬಲಾತ್ಕರಿಸಬಾರದು. ಯಾರನ್ನೂ ಪೀಡಿಸಬಾರದು."

(ತ್ವಬ್ರಿ, ಪುಟ: 2405)

ಉಮರ್ ಫಾರೂಕ್‌ರ ರಾಜ್ಯಪಾಲರಾಗಿದ್ದ ಅಮ್ರ್ ಬಿನ್ ಆಸ್‌ರು ಈಜಿಪ್ಟ್‌ನಲ್ಲಿ ಮಾಡಿಕೊಂಡ ಒಪ್ಪಂದದಲ್ಲಿ, ಅಲ್ಲಿನ ಕ್ರೈಸ್ತ ವಿಶ್ವಾಸಿಗಳಿಗೆ ಎಲ್ಲ ರೀತಿಯ ಸಂರಕ್ಷಣೆಯ ಭರವಸೆ ನೀಡಿದ್ದರು. ಅಂದಿನಿಂದ ಈ ತನಕ ಕ್ರೋಪ್ಟ್ ಕ್ರೈಸ್ತರು ಅಲ್ಲಿ ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದಾರೆ. ಯಾವ ರೀತಿಯ ಧಾರ್ಮಿಕ ಹಿಂಸೆಯನ್ನೂ ಅವರು ಅನುಭವಿಸಿ ರಲಿಲ್ಲ. ಆಧುನಿಕ ಈಜಿಪ್ಟ್‌ನಲ್ಲಿ ಅವರಿಗೆ ಸುಮಾರು 1500 ಆರಾಧನಾಲಯಗಳು ಮತ್ತು 500 ಸಂಘಟನೆಗಳಿವೆ. ಅವೆಲ್ಲವೂ ಮುಸ್ಲಿಮರ ಆಡಳಿತ ಕಾಲದಲ್ಲಿಯೇ ಸ್ಥಾಪನೆಗೊಂಡಿವೆ. ಇಸ್ಲಾಮ್, ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿಲ್ಲದಿರುತ್ತಿದ್ದರೆ ಸುಮಾರು ಹದಿಮೂರು ಶತಮಾನಗಳಿಗಿಂತಲೂ ಅಧಿಕ ಕಾಲದ ಮುಸ್ಲಿಮ್ ಆಡಳಿತದ ಬಳಿಕವೂ ಅಲ್ಲಿ ಅನ್ಯ ಧರ್ಮೀಯರ ಇಷ್ಟೊಂದು ಆರಾಧನಾಲಯಗಳು ಉಳಿದಿರುತ್ತಿರಲಿಲ್ಲ.

ಮುಸ್ಲಿಮರ ಈ ಸಹಿಷ್ಣುತೆಯಿಂದಾಗಿ ಕ್ರೈಸ್ತ ಸಹೋದರರು ಅವರನ್ನು ಸ್ವಸಮುದಾಯ ದವರಿಗಿಂತ ಹೆಚ್ಚು ಮೆಚ್ಚಿದ್ದರು. ಅಬೂ ಉಬೈದಾರ ನಾಯಕತ್ವದಲ್ಲಿ ಮುಸ್ಲಿಮ್ ಸೇನೆಯು ಜೋರ್ಡಾನ್ ಕಣಿವೆಯಲ್ಲಿ ಬಿಡಾರ ಹೂಡಿದ್ದಾಗ ಅಲ್ಲಿನ ಕ್ರೈಸ್ತ ನಾಯಕರು ಅವರಿಗೆ ಹೀಗೆ ಬರೆದು ತಿಳಿಸಿದ್ದರು: "ಮುಸ್ಲಿಮರೇ, ನಾವು ಬೈಝಾಂಟ್ಯಾನ್‌ರಿಗಿಂತ ನಿಮ್ಮನ್ನು ಮೆಚ್ಚುತ್ತೇವೆ. ಅವರು ನಮ್ಮ ಧರ್ಮವಿಶ್ವಾಸದವರಾಗಿದ್ದರೂ, ನೀವು ಮಾತ್ರ ನಮ್ಮೊಡನೆ ವಚನ ಪಾಲಿಸಿ, ಕರುಣೆ ತೋರಿದಿರಿ. ಅಕ್ರಮವೆಸಗಲಿಲ್ಲ."

**(ಸರ್‌ಥೋಮಸ್ ಅರ್ನಾಳ್ಡ್ ಇಸ್ಲಾಮ್ ಬೋಧನೆ ಮತ್ತು ಪ್ರಚಾರ, ಪುಟ: 67)**

ಭಾರತದಲ್ಲಿ ಸಿಂಧ್ ಪ್ರಾಂತ್ಯವನ್ನು ಆಕ್ರಮಿಸಿ ಸ್ವಾಧೀನ ಪಡಿಸಿದ ಮುಹಮ್ಮದ್ ಬಿನ್ ಕಾಸಿಮ್‌ರಿಗೆ ಸಿರಿಯನ್ ರಾಜ್ಯಪಾಲ ಹಜ್ಜಾಜ್ ಬಿನ್ ಯೂಸುಫ್ ಬರೆದ ಪತ್ರವು ಆ ಕಾಲದಲ್ಲಿ ನೀಡಲಾಗಿದ್ದ ವಿಶ್ವಾಸ ಸ್ವಾತಂತ್ರ್ಯವನ್ನು ದೃಢಪಡಿಸುತ್ತದೆ. ಅವರು ಹೀಗೆ ಬರೆದಿದ್ದರು: "ಅವರು ನಮ್ಮ ಭದ್ರತಾ ವ್ಯವಸ್ಥೆಗೆ ಬದ್ಧರಾಗಿ ತೆರಿಗೆದಾರರಾಗಿರುತ್ತಾ ನಾವು ಅವರಿಂದ ಇನ್ನೇನು ನಿರೀಕ್ಷಿಸಬೇಕು? ಅವರ ದೇವಮಂದಿರನ್ನು ಆರಾಧಿಸುವ ಸ್ವಾತಂತ್ರ್ಯವನ್ನು ನಾವು ಅವರಿಗೆ ನೀಡಿದ್ದೇವೆ. ಯಾರನ್ನೂ ಸ್ವಧರ್ಮದಿಂದ ಹಿಂಜರಿಸಬಾರದು ಮತ್ತು ಅವರ ಆರಾಧನಾ ಕರ್ಮಗಳಿಗೆ ಅಡ್ಡಿಪಡಿಸಬಾರದು."

**(Elliot & Dowson: Vol:1, Chachanama PP 185-186)**

ಔರಂಗಜ಼ೇಬ್, ಭಾರತೀಯ ಇತಿಹಾಸದಲ್ಲಿ ಅತ್ಯಧಿಕ ತಪ್ಪು ತಿಳುವಳಿಕೆಗೀಡಾದ ವ್ಯಕ್ತಿಯಾಗಿದ್ದಾರೆ. ಅವರಿಗೆ ಪರಮತ ವಿರೋಧಿ ಮತ್ತು ತೀವ್ರ ಕೋಮುವಾದಿಯೆಂಬ ಹಣೆಪಟ್ಟಿ ಹಚ್ಚಲಾಗಿದೆ. ಬ್ರಿಟಿಷರ ಸುಳ್ಳು ಪ್ರಚಾರವು ಇದಕ್ಕೆ ಪ್ರೇರಕವಾಗಿದೆ. ವಸ್ತುತಃ ಅವರು ಸಹೋದರ ಸಮುದಾಯದ ಧಾರ್ಮಿಕ ವ್ಯವಹಾರಗಳಲ್ಲಿ ಯಾವುದೇ ಹಸ್ತಕ್ಷೇಪ ನಡೆಸಿರಲಿಲ್ಲ, ಅವರು ವಿಶ್ವಾಸ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಅನುಮತಿಸಿದ್ದರು. ಬನಾರಸ್‌ನ ರಾಜ್ಯಪಾಲರಾಗಿದ್ದ ಅಬುಲ್ ಹಸನ್‌ರಿಗೆ ಅವರು ಕಳುಹಿಸಿದ ಆಜ್ಞೆಯಲ್ಲಿ ಹೀಗಿದೆ: "ನಮ್ಮ ಈ ನ್ಯಾಯನಿಷ್ಠ ಆಡಳಿತ ಕಾಲದಲ್ಲಿಯೂ ಬನಾರಸ್ ಮತ್ತಿತರೆಡೆಗಳಲ್ಲಿ ವಾಸವಾಗಿರುವ ಹಿಂದೂ ಪ್ರಜೆಗಳನ್ನು ಕೆಲವರು ತಾತ್ಸಾರ ಮತ್ತು ದ್ವೇಷದಿಂದ ಹಿಂಸಿಸುತ್ತಿರುವರೆಂಬ ಸುದ್ದಿ ದೊರೆತಿದೆ. ಅಲ್ಲಿನ ಆರಾಧನಾಲಯ ಸಂರಕ್ಷಕರಾದ ಬ್ರಾಹ್ಮಣರನ್ನು ಬೆದರಿಸಿ ಅವರ ಕೆಲಸ ಕಾರ್ಯಗಳಲ್ಲಿ ಅಡ್ಡಿಪಡಿಸಲು ಪ್ರಯತ್ನಿಸುತ್ತಿರುವರೆಂದೂ ತಿಳಿದು ಬಂದಿದೆ. ಪ್ರಾಮಾಣಿಕ ಮತ್ತು ನಿಷ್ಠಾವಂತರಾಗಿರುವ ಅಬುಲ್ ಹಸನ್‌ರಿಗೆ ನಾವು ಹೀಗೆ ಆಜ್ಞಾಪಿಸುತ್ತಿದ್ದೇವೆ: ಈ ಆಜ್ಞೆ ತಲಪಿದ ಕೂಡಲೇ ಅಂಥ ಕುಕೃತ್ಯಗಳನ್ನು ತಡೆಯಬೇಕು. ಬ್ರಾಹ್ಮಣರ ಕರ್ತವ್ಯ ನಿರ್ವಹಣೆಗೆ ಯಾವುದೇ ಅಡ್ಡಿಯಾಗದಂತೆ ನೋಡಿಕೊಳ್ಳಬೇಕು. ಅನಂತಕಾಲ ಉಳಿಯಬೇಕಾದ ಮತ್ತು ದೇವದತ್ತವಾಗಿರುವ ನಮ್ಮ ಸಾಮ್ರಾಜ್ಯದ ಉನ್ನತಿ ಮತ್ತು ಮಾನವಕೋಟಿಯ ಸಮಗ್ರ ಹಿತಕ್ಕಾಗಿ ಅವರು ನಡೆಸುವ ಪ್ರಾರ್ಥನೆಗಳು ನಿರ್ವಿಘ್ನವಾಗಿ ಸಾಗುವ ಅವಕಾಶ ಒದಗಿಸಬೇಕು. ಇದನ್ನು ಬಹಳ ಅಗತ್ಯದ ಕೆಲಸವೆಂದು ಪರಿಗಣಿಸಿ ಕೂಡಲೇ ಸೂಕ್ತ ಕ್ರಮ ಕೈಗೊಳ್ಳಬೇಕು" (ಸಿ.ಕೆ. ಕರೀಮ್ ಇತಿಹಾಸ ಪಠನ, ಪುಟ: 327) ಹಿಜರಿ 1090 ರಬೀವುಲ್ ಆಖಿರ್ 17.

ಔರಂಗಜ಼ೇಬರ ಧಾರ್ಮಿಕ ಧೋರಣೆಯನ್ನು ಅಲೆಗ್ಸಾಂಡರ್ ಹ್ಯಾಮಿಲ್ಟನ್ ಹೀಗೆ ವಿಶ್ಲೇಷಿಸಿದ್ದಾರೆ: "ಹಿಂದುಗಳಿಗೆ ಪರಿಪೂರ್ಣ ಧಾರ್ಮಿಕ ಸ್ವಾತಂತ್ರ್ಯ ಲಭಿಸುತ್ತಿದೆ ಮಾತ್ರವಲ್ಲ, ಹಿಂದೂ ರಾಜಂದಿರ ಆಶ್ರಯದಲ್ಲಿ ಅವರು ನಿರ್ವಹಿಸುತ್ತಿದ್ದ ವ್ರತಾನುಷ್ಠಾನ ಉತ್ಸವಾದಿಗಳ ಆಚರಣೆಯ ಸೌಲಭ್ಯಗಳಿವೆ. ಕೇವಲ ಮೀರತ್ ನಗರವೊಂದರಲ್ಲಿಯೇ ಹಿಂದುಗಳಲ್ಲಿ ನೂರಾರು ವಿಭಿನ್ನ ಗುಂಪುಗಳಿದ್ದರೂ ಪ್ರಾರ್ಥನೆ ಮತ್ತು ತತ್ವಸಿದ್ಧಾಂತಗಳ ಬಗ್ಗೆ ಅವರಲ್ಲಿ ಯಾವುದೇ ವಿವಾದವಿಲ್ಲ. ಪ್ರತಿಯೊಬ್ಬರಿಗೂ ತಾವು ಬಯಸಿದಂತೆ ದೇವಾರ್ಚನೆ ನಡೆಸುವ ಮತ್ತು ಆರಾಧಿಸುವ ಸ್ವಾತಂತ್ರ್ಯವಿದೆ. ಧರ್ಮ ಸಂಘರ್ಷಗಳು ಅಪರಿಚಿತವಾಗಿದೆ." **(A New Account of the East Indies)**

ಮುಸ್ಲಿಮರು ಹಲವು ಶತಮಾನಗಳ ಕಾಲ ರಾಜ್ಯಭಾರ ನಡೆಸಿದ್ದರೂ ಅವರು ಇಲ್ಲಿ ಅಲ್ಪಸಂಖ್ಯಾತರಾಗಿಯೇ ಉಳಿದಿದ್ದಾರೆ. ಇದರಿಂದ ಭಾರತದಲ್ಲಿ ಬಲಾತ್ಕಾರದ ಮತಾಂತರ

ಡೆದಿಲ್ಲ ಮತ್ತು ವಿಶ್ವಾಸ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಅನುಮತಿಸಲಾಗಿತ್ತೆಂದು ಸಂದೇಹವಾಗಿ ಗ್ರಹಿಸಬಹುದು. ಮುಸ್ಲಿಮ್ ಆಡಳಿತಗಾರರ ರಾಜಧಾನಿಯಾಗಿದ್ದ ಉತ್ತರ ಪ್ರದೇಶದಲ್ಲಿ ಈಗಲೂ 11% ಮತ್ತು ಮೈಸೂರಿನಲ್ಲಿ ಕೇವಲ 5% ಮುಸ್ಲಿಮರಿದ್ದಾರೆ. ಭಾರತದ ಇತರೆಡೆಗಳಲ್ಲಿಯೂ ಮುಸ್ಲಿಮ್ ಆಡಳಿತಗಾರರ ಕಾಲದಲ್ಲಿ ಇಸ್ಲಾಮ್ ವ್ಯಾಪಿಸಿಲ್ಲ ವೆಂಬುದು ಗಮನಾರ್ಹವಾಗಿದೆ. ಬಂಗಾಳದ ಮತಾಂತರದ ಕುರಿತು ದೊರೆತ ದಾಖಲೆಯು ಈ ವಾಸ್ತವಿಕತೆಯನ್ನು ಸ್ಪಷ್ಟಪಡಿಸುತ್ತದೆ:

"ಬ್ರಿಟಿಷರ ಆಡಳಿತ ಕಾಲದಲ್ಲಿ ನಡೆದ ನಿರಂತರ ಮತಾಂತರಗಳಿಂದ ಒಂದು ವಿಷಯವು ನಿಚ್ಚಳಗೊಂಡಿತು. ರಾಜಕೀಯ ಅಧಿಕಾರವಿದ್ದರೂ ಇಲ್ಲದಿದ್ದರೂ ಬಂಗಾಳದಲ್ಲಿ ಇಸ್ಲಾಮ್ ನಿರಂತರ ವಿಕಾಸವಾಗುತ್ತಿದೆಯೆಂದು 1891ರ ಜನಗಣತಿ ಸೂಚಿಸುತ್ತದೆ. 1872ರ ಬಳಿಕ ಉತ್ತರ ಬಂಗಾಳದಲ್ಲಿ 10,000ಕ್ಕೆ 100ರಂತೆ, ಪೂರ್ವ ಬಂಗಾಳದಲ್ಲಿ 262ರಂತೆ, ಪಶ್ಚಿಮ ಬಂಗಾಳದಲ್ಲಿ 110ರಂತೆ ಮತ್ತು ಇಡೀ ಬಂಗಾಳ ಪ್ರಾಂತ್ಯದಲ್ಲಿ ಸರಾಸರಿ 159 ರಂತೆ ಹೆಚ್ಚಳವುಂಟಾಗಿದೆ." **(Census of India 1891 Vol: 3)**

ಸರ್. ಡಬ್ಲ್ಯೂ. ಡಬ್ಲ್ಯೂ. ಹಂಟರ್ ಹೀಗೆ ಬರೆದಿದ್ದಾರೆ: "ಮುಸ್ಲಿಮರ ಆಡಳಿತ ಕೇಂದ್ರ ಗಳಾಗಿದ್ದ ದೆಹಲಿ ಮತ್ತು ಆಗ್ರಾಗಳಲ್ಲಿ ಮುಸ್ಲಿಮರ ಸಂಖ್ಯೆ ಪರಿಮಿತವಾಗಿದೆ. ದೆಹಲಿಯಲ್ಲಿ $/_{10}$ ಪಾಲು ಇದ್ದರೆ ಆಗ್ರಾದಲ್ಲಿ ಕಾಲಂಶವೂ ಇಲ್ಲ." **(The Religion of India)**

ಇಸ್ಲಾಮಿನ ಈ ಸಹಿಷ್ಣುತೆಯ ಧೋರಣೆಯ ಕುರಿತು ದ್ಬೋಬಿನೋ ಹೀಗೆ ಬರೆದಿದ್ದಾರೆ:

"ಇಸ್ಲಾಮ್ ಧರ್ಮವು, ವೈಯಕ್ತಿಕ ವಿಶ್ವಾಸದಲ್ಲಿ ಹಸ್ತಕ್ಷೇಪ ನಡೆಸದ ಅತ್ಯಂತ ಉದಾರಧರ್ಮವೆಂದು ಕಂಡು ಬರುತ್ತದೆ. ರಾಷ್ಟ್ರದ ಭದ್ರತೆಯು ಅಪಾಯಕ್ಕೆ ಸಿಲುಕಿದಾಗ ಇಸ್ಲಾಮೀ ಸರಕಾರಗಳು ಧಾರ್ಮಿಕ ಐಕ್ಯದ ಎಲ್ಲ ಮಾರ್ಗಗಳನ್ನು ಅಂಗೀಕರಿಸಲು ಪ್ರೇರಿತ ವಾದುವು. ಆ ವೇಳೆಯಲ್ಲಿಯೂ ಇಸ್ಲಾಮೀ ಮೌಲ್ಯಗಳಿಂದ ಮಾಡಿದ ಈ ಉದಾರ ನೀತಿಯು ಅದರ ಉತ್ತುಂಗದಲ್ಲಿತ್ತು. ಹಿಂಸೆ ಮತ್ತು ಬಲಾತ್ಕಾರದ ಯಾವೊಂದು ಲಾಂಛನವೂ ನಮಗೆ ಎಲ್ಲಿಯೂ ಗೋಚರಿಸುವುದಿಲ್ಲ."

**(ಸರ್ ಥಾಮಸ್ ಆರ್ನಾಲ್ಡ್: ಇಸ್ಲಾಮ್ ಬೋಧನೆ ಮತ್ತು ಪ್ರಚಾರ, ಪುಟ: 551)**

ಕಳೆದ 14 ಶತಮಾನಗಳ ಇತಿಹಾಸವನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸುವವರಿಗೆ, ಇಸ್ಲಾಮೀ ಸರಕಾರಗಳು, ಮತಾಂತರಕ್ಕಾಗಿ ಯಾರನ್ನೂ ಬಲಾತ್ಕರಿಸಿಲ್ಲ, ರಾಷ್ಟ್ರದ ಎಲ್ಲ ಪ್ರಜೆಗಳಿಗೂ ಸಂಪೂರ್ಣ ವಿಶ್ವಾಸ ಸ್ವಾತಂತ್ರ್ಯವಿದ್ದಿತೆಂದು ಸ್ಪಷ್ಟವಾಗಿ ಮನವರಿಕೆಯಾದೀತು. ಕೆಲವು ದುಷ್ಟ ಮುಸ್ಲಿಮ್ ಆಡಳಿತಗಾರರ ಆಶ್ರಯದಲ್ಲಿ ಮುಸ್ಲಿಮರಂತೆಯೇ ಮುಸ್ಲಿಮೇತರ ಪ್ರಜೆಗಳೂ ಬಹಳಷ್ಟು ಕಷ್ಟ ನಷ್ಟಗಳನ್ನು ಅನುಭವಿಸಿದ್ದರೆಂಬ ವಾಸ್ತವಿಕತೆಯನ್ನು ಇಲ್ಲಿ ನಿರ್ಲಕ್ಷಿಸುವಂತಿಲ್ಲ. ಆದರೆ ಅವುಗಳಿಗೆ ಧಾರ್ಮಿಕ ಹಿನ್ನೆಲೆಗಳಿರಲಿಲ್ಲ, ಬದಲಾಗಿ ಅವೆಲ್ಲವೂ

ಎಲ್ಲ ಕಾಲಗಳ ಮರ್ದಕ ರಾಜಂದಿರರ ಸಾಮಾನ್ಯ ಧೋರಣೆಯಾಗಿತ್ತು. ಇಸ್ಲಾಮ ಧರ್ಮವು ಬಲಾತ್ಕಾರದ ಮತಾಂತರವನ್ನು ನಿಷೇಧಿಸಿ, ಸಂಪೂರ್ಣ ವಿಶ್ವಾಸ ಸ್ವಾತಂತ್ರ್ಯವನ ಅನುಮತಿಸಿತ್ತು. ಆದ್ದರಿಂದ ಧಾರ್ಮಿಕ ಮೌಲ್ಯಗಳಿಗೆ ನಿಷ್ಠರಾಗಿದ್ದ ವಿದ್ವಾಂಸರು ಮತ ಆಡಳಿತಗಾರರು ತದ್ವಿರುದ್ಧ ಧೋರಣೆಯನ್ನು ಎಂದೂ ಅಂಗೀಕರಿಸಿರಲಿಲ್ಲ.

# ಆರಾಧನಾ ಸ್ವಾತಂತ್ರ್ಯ

ಇಸ್ಲಾಮ್, ಸಂಪೂರ್ಣವಾಗಿ ಏಕದೇವ ವಿಶ್ವಾಸದ ಬುನಾದಿಯಲ್ಲಿದೆ. ಬಹುದೇವ ವಿಶ್ವಾಸವನ್ನೂ ಅದಕ್ಕೆ ಸಂಬಂಧಿಸಿದ ಎಲ್ಲ ಕಲ್ಪನೆ, ಸ್ವಭಾವ ಮತ್ತು ಚಿಹ್ನೆಗಳನ್ನೂ ಅದು ನಿರಾಕರಿಸುತ್ತದೆ. ಆದ್ದರಿಂದಲೇ ಇಸ್ಲಾಮ್, ವಿಗ್ರಹಾರಾಧನೆಯನ್ನು ತೊರೆಯಬೇಕೆಂದು ಬಲವಾಗಿ ಪ್ರತಿಪಾದಿಸುತ್ತದೆ. ಮಾನವ ಜೀವನದಲ್ಲಿ ಅದರ ಒಂದು ಸಣ್ಣ ಅಂಶವನ್ನೂ ಅದು ಮೆಚ್ಚುವುದಿಲ್ಲ. ಹಾಗಿದ್ದರೂ ವಿಗ್ರಹ ಹಾಗೂ ಇತರ ಆರಾಧ್ಯ ವಸ್ತುಗಳನ್ನು ತೆಗಳಿ ನಿಂದಿಸುವುದನ್ನು ಇಸ್ಲಾಮ್ ಬಲವಾಗಿ ನಿಷೇಧಿಸಿದೆ. ಅವುಗಳ ಆರಾಧಕರ ಮನ ನೋಯಿಸುವ, ಅವರ ಭಾವನೆಗಳನ್ನು ಘಾಸಿಗೊಳಿಸುವ ಎಲ್ಲ ರೀತಿಯ ಟೀಕೆಗಳನ್ನು ತೊರೆಯಬೇಕೆಂದೂ ಆಜ್ಞಾಪಿಸಿದೆ. ಆದ್ದರಿಂದ, ವಿಶ್ವಾಸಿಗಳ ಮನನೋಯುವಂತೆ ಆರಾಧ್ಯ ವಸ್ತುಗಳನ್ನೂ ಆದರಣೀಯ ವ್ಯಕ್ತಿಗಳನ್ನೂ ನಿಂದಿಸುವುದು ಅರೋಚಕ ಕೃತ್ಯವಾಗಿದೆ. ಪವಿತ್ರ ಕುರ್‌ಆನ್ ಹೀಗೆ ಆಜ್ಞಾಪಿಸಿರುತ್ತದೆ: **"ಅಲ್ಲಾಹನ ಹೊರತು ಯಾರನ್ನು ಪ್ರಾರ್ಥಿಸುತ್ತಿರುವರೋ ಅವರನ್ನು ತೆಗಳಬೇಡಿರಿ."** **(ಪವಿತ್ರ ಕುರ್‌ಆನ್, 6:108)**

ಇಸ್ಲಾಮ್, ಅನ್ಯಧರ್ಮೀಯರ ಆರಾಧ್ಯ ವಸ್ತುಗಳನ್ನು ನಿಂದಿಸಬಾರದೆಂದು ಆಜ್ಞಾಪಿಸಿದ್ದು ಅವರಿಗೆ ಸಂಪೂರ್ಣ ಆರಾಧನಾ ಸ್ವಾತಂತ್ರ್ಯವನ್ನು ನೀಡಿದೆ. ಪ್ರವಾದಿಗಳ ಕಾಲದಲ್ಲಿ ಅವರ ಮಸೀದಿಯಲ್ಲಿಯೂ ಕ್ರೈಸ್ತ ಬಾಂಧವರಿಗೆ ಆರಾಧನೆ ನಿರ್ವಹಿಸುವ ಅವಕಾಶ ನೀಡಿದ್ದರು. ಒಮ್ಮೆ ನಜ್ರಾನ್‌ನ ಕ್ರೈಸ್ತರು ಪ್ರವಾದಿಯವರೊಡನೆ ವಿಚಾರ ವಿನಿಮಯ ನಡೆಸಲಿಕ್ಕಾಗಿ ಮದೀನಾದ ಮಸೀದಿಗೆ ಬಂದರು. ಅವರು ತಮ್ಮ ಧರ್ಮದ ಬಗ್ಗೆ ಹೇಳುತ್ತಿರುವಾಗ ಪ್ರವಾದಿಯವರು ಬಹಳ ಶ್ರದ್ಧೆಯಿಂದ ಆಲಿಸಿದ್ದರು. ತರುವಾಯ ಅವರಿಗೆ ಇಸ್ಲಾಮ್ ಧರ್ಮವನ್ನು ಪರಿಚಯಿಸಿದರು. ತನ್ಮಧ್ಯೆ ನಜ್ರಾನ್‌ನಿಂದ ಬಂದ ಅತಿಥಿಗಳಿಗೆ ಅವರ ಪ್ರಾರ್ಥನೆಯ ವೇಳೆಯಾಯಿತು. ಆ ಕೂಡಲೇ ಪ್ರವಾದಿವರ್ಯರು(ಸ) ಅವರಿಗೆ ಅದೇ ಮಸೀದಿಯಲ್ಲಿ ಅವರ ಆಚಾರ ಪ್ರಕಾರ ಪ್ರಾರ್ಥಿಸುವುದಕ್ಕಾಗಿ ಎಲ್ಲ ಅನುಕೂಲತೆಗಳನ್ನೂ ಒದಗಿಸಿದರು. ಅದರ ಇನ್ನೊಂದು ಪಾರ್ಶ್ವದಲ್ಲಿ ಅವರು ತಮ್ಮ

ಅನುಯಾಯಿಗಳ ಜೊತೆ ಯಲ್ಲಿ ನಮಾಝ್ ನಿರ್ವಹಿಸಿದರು. ಹೀಗೆ ಮುಸ್ಲಿಮರು ಮತ ಕ್ರೈಸ್ತರು ಒಂದೇ ಮಸೀದಿ ಯಲ್ಲಿ ತಂತಮ್ಮ ಧರ್ಮಾಚಾರದಂತೆ ಆರಾಧನಾ ಕರ್ಮಗಳನ ನಿರ್ವಹಿಸುವ ಉದಾತ್ತ ವರ್ತನೆಗೆ ಪ್ರವಾದಿಯವರೇ ನಾಂದಿ ಹಾಕಿದರು.

ಹಾಗೆಯೇ ಇತಿಯೋಪಿಯದಿಂದ ಪ್ರವಾದಿಯವರ ದರ್ಶನಕ್ಕಾಗಿ ಬಂದ ಕ್ರೈ ಬಾಂಧವರಿಗೆ ಮಸೀದಿಯಲ್ಲಿಯೇ ಉಳಕೊಳ್ಳುವ ಸೌಲಭ್ಯ ಒದಗಿಸಿದ್ದರು. ಪ್ರವಾ ಯವರು(ಸ) ಅವರನ್ನು ಆದರದಿಂದ ಸ್ವಾಗತಿಸಿ ಅವರಿಗೆ ಅಗತ್ಯವಿರುವ ಎಲ್ಲ ಏರ್ಪಾಡ ಗಳನ್ನು ಮಾಡಿದರು.

ಪ್ರವಾದಿ(ಸ) ಮತ್ತು ಅವರ ಸಂಗಾತಿಗಳು ಅನ್ಯ ಧರ್ಮೀಯರಿಗೆ ರಕ್ಷಣೆ ನೀಡಿದಾ ಅವರ ವಿಶ್ವಾಸ ಮತ್ತು ಆರಾಧನಾ ಸ್ವಾತಂತ್ರ್ಯಕ್ಕೂ ಭದ್ರತೆ ನೀಡಿದ್ದರು. ನಜ್ರಾನ್‌ನ ಕ್ರೈಸ್ತರೊಡನೆ ಪ್ರವಾದಿವರ್ಯರು(ಸ) ಮಾಡಿಕೊಂಡ ಒಪ್ಪಂದದ ಶರ್ತದಲ್ಲಿ ಹೀಗಿದೆ: "ನಜ್ರಾನ್‌ನ ಕ್ರೈಸ್ತರಿಗೂ ಅವರ ಸಂಗಡಿಗರಿಗೂ ಅಲ್ಲಾಹನ ಅಭಯ ಮತ್ತು ದೇವ ಪ್ರವಾದಿಯಾದ ಮುಹಮ್ಮದ್‌ರ ಕರ್ತವ್ಯಬದ್ಧ ಸ್ಥಿರಕ್ಷಣೆಯಿದೆ. ಇದು ಅವರ ಪ್ರಾಣ, ಧರ್ಮ, ಆಸ್ತಿ, ಸಂಪತ್ತು ಇತ್ಯಾದಿಗಳಿಗೂ ಇಲ್ಲಿ ಉಪಸ್ಥಿತರಿರುವವರಿಗೂ ಇಲ್ಲದವರಿಗೂ ಅವರ ಒಂಟೆ ಮತ್ತು ಪ್ರತಿನಿಧಿ ತಂಡಗಳಿಗೂ ಶಿಲುಬೆ ಮತ್ತು ಚರ್ಚ್‌ಗಳಂಥ ಧಾರ್ಮಿಕ ಸಂಕೇತಗಳಿಗೂ ಅನ್ವಯವಾಗುತ್ತದೆ. ಪ್ರಚಲಿತ ಸ್ಥಿತಿಯನ್ನು ಕಿಂಚಿತ್ತೂ ಬದಲಾಯಿಸು ವುದಿಲ್ಲ. ಅವರ ಯಾವ ಹಕ್ಕುಗಳನ್ನೂ ಧಾರ್ಮಿಕ ಚಿಹ್ನೆಗಳನ್ನೂ ಬದಲಾಯಿಸುವುದಿಲ್ಲ. ಅವರ ಪಾದ್ರಿ, ಪುರೋಹಿತ ಅಥವಾ ಚರ್ಚ್‌ನ ಸೇವಕನನ್ನು ಸ್ಥಾನ ಭ್ರಷ್ಟಗೊಳಿಸುವುದಿಲ್ಲ."

ಪ್ರವಾದಿವರ್ಯರ(ಸ) ಪ್ರಥಮ ಉತ್ತರಾಧಿಕಾರಿ ಹಝ್ರತ್ ಅಬೂಬಕರ್‌ರು(ರ) ಹೀರಾ ನಿವಾಸಿಗಳೊಂದಿಗೆ ಹೀಗೆ ಒಪ್ಪಂದ ಮಾಡಿದ್ದರು: "ಅವರ ಆರಾಧನಾಲಯ ಮತ್ತು ಇಗರ್ಜಿ ಹಾಗೂ ಅವರು ವೈರಿಗಳಿಂದ ರಕ್ಷಣೆ ಪಡೆಯುವ ಕೋಟೆಗಳನ್ನು ನಾಶಪಡಿಸು ವುದಿಲ್ಲ. ಘಂಟಾನಾದ ಮತ್ತು ಹಬ್ಬದ ದಿನ ಶಿಲುಬೆ ಮೆರವಣಿಗೆಗೆ ಅಡ್ಡಿಪಡಿಸುವುದಿಲ್ಲ."

ಸಿರಿಯಾಕ್ಕೆ ನೇಮಿಸಿದ ಸೇನೆಗೆ ಅಬೂಬಕರ್‌ರು(ರ) ನೀಡಿದ ಹತ್ತು ಆದೇಶಗಳಲ್ಲಿ ಪುರೋಹಿತರು ಮತ್ತು ಅರ್ಚಕರನ್ನು ಹಿಂಸಿಸಬಾರದು, ಅವರ ಆರಾಧನಾಲಯಗಳನ್ನು ಧ್ವಂಸಗೊಳಿಸಬಾರದೆಂಬುದು ಪ್ರಮುಖವಾಗಿತ್ತು.

ಮುಸ್ಲಿಮ್ ಸೇನಾಧಿಪತಿ ಅಬೂ ಉಬೈದಾ ಬಅ್‌ಲಬಾದ ನಿವಾಸಿಗಳೊಂದಿಗೆ ಮಾಡಿ ಕೊಂಡ ಒಪ್ಪಂದದಲ್ಲಿ ಹೀಗಿತ್ತು: "ಇದು ಬಅ್‌ಲಬಾದ ನಿವಾಸಿಗಳು ಮತ್ತು ಅವರೊಂದಿ ಗಿರುವ ರೋಮನ್ ಹಾಗೂ ಪರ್ಶಿಯನ್ ಅರಬರಿಗೆ ಅನ್ವಯವಾಗುವ ಸಾಮಾನ್ಯ ಒಪ್ಪಂದವಾಗಿದೆ. ನಗರದಲ್ಲಿಯೂ ಹೊರ ವಲಯದಲ್ಲಿಯೂ ಅವರ ಮನೆ, ಚರ್ಚ್, ಪ್ರಾಣ, ಸೊತ್ತುಗಳಿಗೆ ಅಭಯವಿದೆ."

ವಿಶ್ವವಿಖ್ಯಾತ ಸೇನಾನಿ ಖಾಲಿದ್ ಬಿನ್ ವಲೀದ್ ಹೀಗೆ ಒಪ್ಪಂದ ಮಾಡಿಕೊಂಡಿದ್ದರು: "ಅವರ ಮಠ ಮತ್ತು ಚರ್ಚ್‌ಗಳನ್ನು ನಾಶಪಡಿಸುವುದಿಲ್ಲ. ನಮಾಝಿನ ವೇಳೆಯ ಹೊರತು ರಾತ್ರಿ ಮತ್ತು ಹಗಲಿನಲ್ಲಿ ಅವರು ಬಯಸಿದಾಗ ಗಂಟೆ ಬಾರಿಸಬಹುದು. ವಿಶೇಷ ದಿನಗಳಲ್ಲಿ ಶಿಲುಬೆ ಉತ್ಸವ ನಡೆಸಬಹುದು."

ಹಬೀಬ್ ಬಿನ್ ಮಸ್ಲಮರು ಖಬೀಲ್ ನಿವಾಸಿಗಳೊಂದಿಗೂ ಹುದೈಫ ಬಿನ್ ಯಮಾನ್‌ರು ಜುರ್‌ಜಾನ್ ನಿವಾಸಿಗಳೊಂದಿಗೂ ಇಂಥ ಒಪ್ಪಂದಗಳನ್ನು ಮಾಡಿರುವುದಾಗಿ ಇತಿಹಾಸ ದಾಖಲೆಗಳಿಂದ ತಿಳಿದು ಬರುತ್ತದೆ.

ಮಧ್ಯಪೂರ್ವ ದೇಶದ ಕ್ರೈಸ್ತ ವಿಶ್ವಾಸಿಗಳು ಮುಸ್ಲಿಮ್ ಆಡಳಿತದ ಆಶ್ರಯದಲ್ಲಿ ಸಂಪೂರ್ಣ ಧಾರ್ಮಿಕ ಸ್ವಾತಂತ್ರ್ಯವನ್ನು ಅನುಭವಿಸಿದ್ದರಿಂದ ಬಹಳ ಸಂತುಷ್ಟರಾಗಿದ್ದರು. ಸುದೀರ್ಘ 5 ಶತಮಾನಗಳ ಕಾಲ ಇಸ್ಲಾಮಿ ಆಡಳಿತದ ಅಧೀನವಿದ್ದರೂ ಈ ಸ್ಥಿತಿ ಅಥವಾ ಅಭಿಪ್ರಾಯವು ಬದಲಾಗಲಿಲ್ಲ. ರೋಮನರ ಆಡಳಿತಕ್ಕಿಂತ ಮುಸ್ಲಿಮರ ಆಡಳಿತವು ನಮಗೆ ಉತ್ತಮವೆಂದು ಬಹಿರಂಗವಾಗಿ ಸಾರಲೂ ಅವರು ಹಿಂಜರಿಯಲಿಲ್ಲ. ಹನ್ನೆರಡನೆಯ ಶತಮಾನದ ದ್ವಿತೀಯಾರ್ಧದಲ್ಲಿ ಅಂಟೋಕ್ಯಾದ ಯಾಕೋಬಾ ಪೇಟ್ರಿಯಾರ್ಕಿಸ್ ಆಗಿದ್ದ ಹಿರಿಯ ಮೈಕಲ್, ರೋಮ್ ಚಕ್ರವರ್ತಿಯಾಗಿದ್ದ ಹರ್ಕ್ಯುಲೆಸ್‌ನ ದೌರ್ಜನ್ಯದ ಕಥೆಗಳ ಕುರಿತು ಹೀಗೆ ಬರೆದಿದ್ದಾರೆ: "ಈ ಹಿನ್ನೆಲೆಯಲ್ಲಿ ಸರ್ವಶಕ್ತನೂ ಮಾನವರ ಸಾಮ್ರಾಜ್ಯಗಳನ್ನು ತನ್ನ ಹಿತಾನುಸಾರ ಬದಲಾಯಿಸುವ, ತಾನಿಚ್ಛಿಸುವವರಿಗೆ ಸಾಮ್ರಾಜ್ಯವನ್ನು ನೀಡುವ ಮತ್ತು ಬಡವರ ಉದ್ಧಾರಕನಾದ ಪ್ರತೀಕಾರದ ದೇವನು, ರೋಮನರ ಹಸ್ತಗಳಿಂದ ನಮ್ಮನ್ನು ರಕ್ಷಿಸಲಿಕ್ಕಾಗಿ ಇಶ್ಮೇಲಿ ಸಂತಾನಗಳನ್ನು ದಕ್ಷಿಣದಿಂದ ಕರೆತಂದನು. ರೋಮನರು ನಮ್ಮ ಚರ್ಚ್ ಮತ್ತು ಮಠಗಳನ್ನು ದೋಚಿ, ನಮ್ಮನ್ನು ನಿರ್ದಯೆಯಿಂದ ಹಿಂಸಿಸುತ್ತಿದ್ದುದನ್ನು ದೇವನು ನೋಡುತ್ತಿದ್ದನು. ವಸ್ತುತಃ ನಮಗೆ ಸ್ವಲ್ಪ ನಷ್ಟವಾಗಿದ್ದರೂ ಅದಕ್ಕೆ ಕಾಲ್ಸಿಡೋನಿಯನ್ ವತಿಯಿಂದ ವಹಿಸಿಕೊಡಲಾದ ನಮ್ಮ ಚರ್ಚ್‌ಗಳು ಅವರ ವಶವಿರುವುದೇ ಕಾರಣವಾಗಿದೆ. ಅರಬರು ನಗರಗಳನ್ನು ಸ್ವಾಧೀನಪಡಿಸಿದಾಗ ಚರ್ಚ್‌ಗಳ ಯಥಾಸ್ಥಿತಿಯನ್ನು ಕಾಪಾಡಿದರು. ಏನಿದ್ದರೂ ನಮಗೆ ರೋಮನರ ಕ್ರೌರ್ಯ, ದೌರ್ಜನ್ಯ, ರೋಷ, ಧರ್ಮಾಂಧತೆಗಳಿಂದ ವಿಮೋಚನೆ ದೊರಕಿ ನಾವು ನೆಮ್ಮದಿಯಿಂದಿರುವುದು ಸಾಮಾನ್ಯ ವಿಷಯವಲ್ಲ."

**(Michal The Elder, Vol: II, P.P. 412, 413 ಉದ್ಧರಣೆ: ಸರ್ ಥಾಮಸ್ ಅರ್ನಾಲ್ಡ್, ಇಸ್ಲಾಮ್ ಬೋಧನೆ ಮತ್ತು ಪ್ರಚಾರ ಪುಟ: 67)**

ಡಾ। ಮುಸ್ತಫಾಸಬಾಯಿ ಹೀಗೆ ಬರೆದಿದ್ದಾರೆ: ಕ್ರೈಸ್ತರು ಅಮವಿ ಆಡಳಿತ ಕಾಲದಲ್ಲಿಯೇ ತಮ್ಮ ಧಾರ್ಮಿಕ ಆಚಾರ ಮತ್ತು ಉತ್ಸವಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ನೆರವೇರಿಸುತ್ತಿದ್ದರು. ಶಿಲುಬೆ ಹೊತ್ತು ಮೆರವಣಿಗೆ ನಡೆಸುವುದು ಅವರ ರೂಢಿಯಾಗಿತ್ತು.

ಧಾರ್ಮಿಕ ನಾಯಕರು ಸಾಂಪ್ರದಾಯಿಕ ಉಡುಪು ಧರಿಸಿ ಅದರಲ್ಲಿ ಭಾಗವಹಿಸುತ್ತಿದ್ದರು. ಒಮ್ಮೆ ಪೇಟ್ರಿಯಾರ್ಕಿಸ್ ಮೈಕೆಲ್ (Michal) ಒಂದು ಬೃಹತ್ ಮೆರವಣಿಗೆಯೊಂದಿಗೆ ಅಲೆಕ್ಸಾಂಡ್ರಿಯಾ ನಗರಕ್ಕೆ ಆಗಮಿಸಿದರು. ಶಿಲುಬೆ, ಮೇಣದ ಬತ್ತಿ ಮತ್ತು ಬೈಬಲ್ ಹಿಡಿದವರು ಅದರ ಮುಂಚೂಣಿಯಲ್ಲಿದ್ದರು. ಭಕ್ತ ಜನರು ತಮ್ಮ ಪೇಟ್ರಿಯಾರ್ಕಿಸನ ಶ್ರೇಷ್ಠತೆಯನ್ನು ಗಟ್ಟಿಯಾಗಿ ಘೋಷಿಸುತ್ತಿದ್ದರು. ಈ ಘಟನೆ ಹಿಶಾಮ್ ಬಿನ್ ಅಬ್ದುಲ್ ಮಲಿಕ್‌ರ ಕಾಲದಲ್ಲಿ ನಡೆದಿತ್ತು.

"ಹಾರೂನ್ ರಶೀದ್‌ರ ಕಾಲದಲ್ಲಿ ಈಸ್ಟರ್ ಹಬ್ಬದ ಪ್ರಯುಕ್ತ ಕ್ರೈಸ್ತರು ದೊಡ್ಡ ಶಿಲುಬೆಗಳನ್ನು ಹೊತ್ತು ಭಾರೀ ಮೆರವಣಿಗೆ ನಡೆಸಿದ್ದರು."

**(ಡಾ। ಮುಸ್ತಫಾಸಬಾಯಿ: ಇಸ್ಲಾಮೀ ನಾಗರಿಕತೆ ಕೆಲವು ಶೋಭಾಯಮಾನ ಚಿತ್ರಗಳು ಪುಟ: 113)**

'ಅಹ್ಸನುತ್ತಕಾಸಿಮ್' ಎಂಬ ಗ್ರಂಥದಲ್ಲಿ ಮಕ್ದಿಸ್ ಹೀಗೆಂದಿದ್ದಾರೆ: "ಕ್ರೈಸ್ತ ಹಬ್ಬದ ವೇಳೆ ಶೀರೋಸ್ ಪೇಟೆಯನ್ನು ಅಲಂಕರಿಸುವ ರೂಢಿಯಿತ್ತು. ನೈಲ್ ನದಿಯಲ್ಲಿ ನೆರೆ ಬಂದ ಸಂದರ್ಭದಲ್ಲಿ ಕ್ರೈಸ್ತರು ಜರಗಿಸುತ್ತಿದ್ದ ಶಿಲುಬೆ ಏರಿಸುವ ಆಚರಣೆಯಲ್ಲಿ ಈಜಿಪ್ಟ್ ನಿವಾಸಿಗಳೂ ಅತಿಥಿಗಳಾಗಿ ಭಾಗವಹಿಸುತ್ತಿದ್ದರು."

'ಮಕ್ರೀಸಿ' ತಮ್ಮ ಖಿತ್ವತ್ ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ: "ಅಖ್ಶೀದಿಗಳ ಕಾಲದಲ್ಲಿ ಜನಸಾಮಾನ್ಯರು ಜ್ಞಾನ ಸ್ನಾನವನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಹಿಜರಿ ಶಕ 230 ರಲ್ಲಿ ಜ್ಞಾನ ಸ್ನಾನದ ಪ್ರಯುಕ್ತ ಬಹಳ ಆಕರ್ಷಕ ಉತ್ಸವ ಜರಗಿತು. ಆಗ 'ಅಲ್ ಮನೀಲ್' ದ್ವೀಪದ ವಿಶೇಷ ಅರಮನೆಯಲ್ಲಿ ಕುಳಿತು ಅಖ್ಶೀದಿ ಚಕ್ರವರ್ತಿ ಮುಹಮ್ಮದ್ ತ್ವಗ್ಜ್ ಅದನ್ನು ವೀಕ್ಷಿಸಿದರು. ಹೀಗೆ ಜ್ಞಾನ ಸ್ನಾನ ಆಚರಣೆಯಲ್ಲಿ ಎಲ್ಲ ಜನ ವಿಭಾಗಗಳೂ ಸಂತೋಷದಿಂದ ಭಾಗವಹಿಸಿದುವು."

ಕಳೆದ 14 ಶತಮಾನಗಳ ಇಸ್ಲಾಮೀ ಇತಿಹಾಸದಲ್ಲಿ ಮುಸ್ಲಿಮ್ ಆಡಳಿತಗಾರರು ಅಥವಾ ವಿದ್ವಾಂಸರು ಅನ್ಯಧರ್ಮೀಯರ ಆರಾಧನಾ ಸ್ವಾತಂತ್ರ್ಯವನ್ನು ನಿರೋಧಿಸಿದ್ದರೂ ಮೊಟಕುಗೊಳಿಸಿದ್ದರೆಂದು ಸಾಬೀತುಪಡಿಸಲು ಸಾಧ್ಯವಿಲ್ಲ. ಸಿಂಧನ್ನು ಸ್ವಾಧೀನಪಡಿಸಿದ ಮುಹಮ್ಮದ್ ಬಿನ್ ಕಾಸಿಮ್‌ರ ಕುರಿತು ಈಶ್ವರೀ ಪ್ರಸಾದ್ ಹೀಗೆಂದಿದ್ದಾರೆ: "ಅವರು ಬ್ರಾಹ್ಮಣರೊಂದಿಗೆ ಅವರ ಘನತೆಗೆ ತಕ್ಕಂತೆ ಗೌರವದಿಂದ ವರ್ತಿಸುತ್ತಿದ್ದರು... ಧಾರ್ಮಿಕ ಸ್ವಾತಂತ್ರ್ಯವನ್ನೂ ಅನುಮತಿಸಲಾಗಿತ್ತು. ಆರಾಧನೆಗೆ ಸಂಬಂಧಿಸಿ ಬ್ರಾಹ್ಮಣರ ಅಭೀಷ್ಟಗಳಿಗೆ ಮನ್ನಣೆ ನೀಡಲಾಗಿತ್ತು." **(History of Muslim Rule P: 46)**

ಮುಂದೆ ಅವರು ಹೀಗೆಂದಿದ್ದಾರೆ: "ಅವರು ಅಧೀನಪಡಿಸಿದ ಜನರಿಗೆ ಆರಾಧನಾ ಸ್ವಾತಂತ್ರ್ಯವನ್ನು ನೀಡಿ ಅವರೊಂದಿಗೆ ಸಹಿಷ್ಣುತೆಯಿಂದ ವರ್ತಿಸಿದ್ದರು." **(Ibid, P: 49)**

ಮುಸ್ಲಿಮ್ ಯೋಧರು ಅಂಗೀಕರಿಸಿದ ಉದಾರ ನೀತಿಯ ಕುರಿತು ಡಾ| ತಾರಾಚಂದ್ ಹೀಗೆ ಬರೆದಿದ್ದಾರೆ: "ಮುಸ್ಲಿಮ್ ಯೋಧರು ಸೋತವರೊಡನೆ ಬಹಳ ಉತ್ತಮವಾಗಿ ವರ್ತಿಸುತ್ತಿದ್ದರು. ಹಿಂದೂ ವಿದ್ವಾಂಸರಿಗೂ ಪೂಜಾರಿಗಳಿಗೂ ತಂತಮ್ಮ ದೇವಾಲಯಗಳಲ್ಲಿ ಆರಾಧನೆಗಳನ್ನು ನಡೆಸುವ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಿದ್ದರು. ಪೂಜಾರಿಗಳಿಗೂ ದೇವಾಲಯಗಳಿಗೂ ಸಾಂಪ್ರದಾಯಿಕ ಕಾಣಿಕೆಗಳನ್ನು ನೀಡಲು ರೈತರಿಗೆ ಒಪ್ಪಿಗೆಯಿತ್ತರು."

**(ಅಹ್ಲೆ ಹಿಂದ್ + ಮುಕ್ತಸರ್ ತಾರೀಕ್ ಪುಟ: 153)**

ಮೊಗಲ್ ಆಡಳಿತದ ಸ್ಥಾಪಕನಾದ ಬಾಬರ್ ಚಕ್ರವರ್ತಿ ಪರಧರ್ಮೀಯರೊಡನೆ ಬಹಳ ಔದಾರ್ಯದಿಂದ ವರ್ತಿಸುತ್ತಿದ್ದರು ಮತ್ತು ಅವರ ಕಾಲದಲ್ಲಿ ಹಿಂದುಗಳಿಗೆ ಯಾವ ತೊಂದರೆಯೂ ಇರಲಿಲ್ಲವೆಂದು ಸ್ಟೇನ್ಲಿ ಲೆಯಿನ್‌ಪೂಲ್ ಸ್ಪಷ್ಟವಾಗಿ ಸಾಬೀತುಪಡಿಸಿದ್ದಾರೆ:

**(Illustrated Weekly 12-10-1975)**

ಮಗ ಹುಮಾಯೂನನಿಗೆ ಬಾಬರ್ ನೀಡಿದ ಅಂತ್ಯೋಪದೇಶದಲ್ಲಿ ಹಿಂದೂ ಸಹೋದರರೊಡನೆ ಉದಾರವಾಗಿ ವರ್ತಿಸಬೇಕೆಂದು ವಿಶೇಷ ತಾಕೀತು ಮಾಡಿದ್ದರು. ಮಾಜೀ ರಾಷ್ಟ್ರಪತಿ ಡಾ| ರಾಜೇಂದ್ರ ಪ್ರಸಾದ್ ಉಲ್ಲೇಖಿಸಿರುವ ಪ್ರಸ್ತುತ ಅಂತ್ಯೋಪದೇಶ ಗಳಲ್ಲಿ ಹೀಗೆ ಹೇಳಲಾಗಿದೆ: "ಭಾರತವು ವಿವಿಧ ಧರ್ಮಗಳ ದೇಶವಾಗಿದೆ. ಅದಕ್ಕಾಗಿ ನೀನು ಕೃತಜ್ಞತೆ ಸಲ್ಲಿಸಬೇಕು. ಅಲ್ಲಾಹನು ನಿನಗೆ ಅಧಿಕಾರವನ್ನು ನೀಡಿದರೆ ನೀನು ಧರ್ಮ ಪಕ್ಷಪಾತಿಯಾಗಬಾರದು. ಹಿಂದುಗಳ ಮನನೋಯುವಂತೆ ದನಗಳನ್ನು ಕಡಿಯಬಾರದು. ಹಾಗೆ ಮಾಡಿದರೆ ಜನರು ನಿನ್ನನ್ನು ದ್ವೇಷಿಸಬಹುದು. ಮಂದಿರ ಮತ್ತು ಆರಾಧನಾಲಯ ಗಳನ್ನು ಕೆಡಹಬಾರದು. ರಾಜನು ಪ್ರಜೆಗಳನ್ನೂ ಪ್ರಜೆಗಳು ರಾಜನನ್ನೂ ಪ್ರೀತಿಸುವಂತಹ ವಾತಾವರಣವನ್ನು ಸೃಷ್ಟಿಸಬೇಕು. ದಯೆಯ ಹೃದಯದಿಂದ ಇಸ್ಲಾಮನ್ನು ಸಾರ್ಥಕಗೊಳಿಸ ಬೇಕು, ಬಲಾತ್ಕಾರ ಮಾಡಬಾರದು." **(ಉದ್ಧರಣೆ: ಮಿಸೆಸ್ ನಿಲೋಫರ್ ಅಹ್ಮದ್, ಇನ್‌ಸ್ಟಿಟ್ಯೂಟ್ ಆಫ್ ಒಬ್ಜೆಕ್ಟಿವ್ ಸ್ಟಡೀಸ್, ನವದೆಹಲಿ.)**

ಪಾಟ್ನಾ ವಾರ್ಸಿಟಿಯ ಇತಿಹಾಸ ಉಪನ್ಯಾಸಕ ಶ್ರೀ ರಾಮ್ ಪ್ರಸಾದ್ ಖೋಸ್ಲಾ ಬಾಬರ್ ಚಕ್ರವರ್ತಿಯನ್ನು, "ಧರ್ಮ ಪಕ್ಷಪಾತ ಮತ್ತು ಸಂಕುಚಿತ ದೃಷ್ಟಿಕೋನಗಳಿಲ್ಲದ ಆಡಳಿತಗಾರ"ನೆಂದು ಬಣ್ಣಿಸಿದ್ದಾರೆ. (Moghal Kingship ಪುಟ: 207) ಪಂಡಿತ ಜವಾಹರಲಾಲ್ ನೆಹ್ರೂರವರು ಝುಹೀರುದ್ದೀನ್ ಮುಹಮ್ಮದ್ ಬಾಬರ್‌ನನ್ನು ನ್ಯಾಯ ನಿಷ್ಠ ಮತ್ತು ಸಮರ್ಥ ಆಡಳಿತಗಾರನೆಂದು ವರ್ಣಿಸಿದ್ದಾರೆ. (Discovery of India) ಅಲಹಾಬಾದ್ ವಾರ್ಸಿಟಿಯ ಇತಿಹಾಸ ಉಪನ್ಯಾಸಕ ಡಾ| ರಾಮಪ್ರಸಾದ್ ತ್ರಿಪಾಠಿ ಯವರು, ಬಾಬರ್ ಮತಾಂಧನಾಗಿರಲಿಲ್ಲ, ಅವನು ಹಿಂದುಗಳೊಡನೆ ಸೌಹಾರ್ದದಿಂದ ವರ್ತಿಸುತ್ತಿದ್ದನೆಂದು ಸಾಧಾರ ಸ್ಪಷ್ಟಪಡಿಸಿದ್ದಾರೆ.

**(Rise & Fall of the Moghal Empire)**

ಖ್ಯಾತ ಇತಿಹಾಸಗಾರ ರೂಶ್ ಬ್ರೂಕ್ ವಿಲ್ಲಿಯಮ್ ಹೀಗೆ ಬರೆದಿದ್ದಾರೆ. "ಬಾಬರ್, ಸದ್ಗುಣ ಸಂಪನ್ನರಾಗಿದ್ದರು. ಉದಾತ್ತ ಭಾವನೆ, ನಿಷ್ಠುರ ನ್ಯಾಯಪ್ರಜ್ಞೆ, ದಿಗ್ವಿಜಯ ಸಾಮರ್ಥ್ಯ, ಪ್ರಜಾ ಪ್ರೇಮ, ದೇವವಿಶ್ವಾಸಿಗಳೊಡನೆ ಗೌರವಭಾವ, ಸೈನಿಕರ ಮನ ಸೆಳೆಯುವ ಪ್ರತಿಭೆ, ಅದಮ್ಯ ನ್ಯಾಯ ನಿಷ್ಠೆ ಇತ್ಯಾದಿ ಗುಣ ವೈಶಿಷ್ಟ್ಯಗಳು ಬಾಬರನಲ್ಲಿ ರಕ್ತಗತವಾಗಿತ್ತು."

**(Rush brook William the Empire builder of 16th century)**

ಅಕ್ಬರ್ ಚಕ್ರವರ್ತಿಯ ಮಗ ಜಹಾಂಗೀರನ ಕಾಲದಲ್ಲಿ ಕೇವಲ ವಾರಣಾಸಿಯಲ್ಲಿಯೇ 70 ಹೊಸ ಹಿಂದೂ ದೇವಾಲಯಗಳನ್ನು ನಿರ್ಮಿಸಲಾಗಿತ್ತು. ಮೊಗಲರ ಕಾಲದ ವಿವಾದಾಸ್ಪದ ವ್ಯಕ್ತಿಯಾಗಿರುವ ಔರಂಗಝೇಬರ ಕಾಲದಲ್ಲಿಯೂ ಅನೇಕ ಹೊಸ ದೇವಾಲಯಗಳನ್ನು ನಿರ್ಮಿಸಲಾಗಿತ್ತು. 'ಆಲಂಗೀರ ನಾಮ'ದಲ್ಲಿ ಹೀಗೆ ಬರೆಯಲಾಗಿದೆ: "ಔರಂಗಝೇಬನು ಬಂಗಾಳ ಮತ್ತು ಅಸ್ಸಾಮ್‌ಗಳಲ್ಲಿ ಕೆಲವು ಹಿಂದೂ ದೇವಾಲಯಗಳನ್ನು ಕಟ್ಟಿಸಿ, ಬುದ್ಧಗಯಾಕ್ಕೆ ಅಪಾರ ಭೂಮಿಯನ್ನು ಉಂಬಳಿಯಾಗಿ ನೀಡಿದನು."

**(Illustrated Weekly 5-10-75)**

ಔರಂಗಝೇಬನ ಕಾಲದಲ್ಲಿ (1671ರಲ್ಲಿ) ಕಾಶಿ ವಿಶ್ವನಾಥ ಕ್ಷೇತ್ರ ಮತ್ತು ವಾರಣಾಸಿಯ ವಿವಿಧ ದೇವಾಲಯಗಳಿಗೆ ಜಮೀನು ಮತ್ತಿತರ ನೆರವುಗಳನ್ನು ಒದಗಿಸಲಾಗಿತ್ತು. ಅವರ ಕಾಲದಲ್ಲಿಯೇ ಕುಮಾರ ಗುರುಗಳು ಉತ್ತರ ಭಾರತದಲ್ಲಿ ಕಾಶೀಮಠ ಮತ್ತು ಕೇದಾರನಾಥ ಕ್ಷೇತ್ರವನ್ನು ಕಟ್ಟಿಸಿದರು. ಚಕ್ರವರ್ತಿಯು ಅವುಗಳಿಗೆ ಅವಶ್ಯಕ ಸಹಾಯ ಸಹಕಾರಗಳನ್ನು ನೀಡಿದ್ದನು.

ಪಂಡಿತ್ ಸುಂದರಲಾಲ್ ಹೀಗೆಂದಿದ್ದಾರೆ: "ಅಕ್ಬರ್, ಜಹಾಂಗೀರ್ ಮತ್ತು ಶಾಜಹಾನ್‌ರ ಕಾಲದಲ್ಲಿಯೂ ಔರಂಗಝೇಬ್ ಮತ್ತು ಅವರ ಉತ್ತರಾಧಿಕಾರಿಗಳ ಕಾಲ ದಲ್ಲಿಯೂ ಹಿಂದುಗಳು ಮತ್ತು ಮುಸ್ಲಿಮರೊಡನೆ ಸಮಾನ ಧೋರಣೆಯನ್ನು ಅನುಸರಿಸಲಾಗುತ್ತಿತ್ತು. ಉಭಯ ಧರ್ಮೀಯರನ್ನು ಸಮಾನವಾಗಿ ಗೌರವಿಸಲಾಯಿತು. ಧರ್ಮದ ಹೆಸರಲ್ಲಿ ಯಾರೊಡನೆಯೂ ಯಾವ ಪಕ್ಷಪಾತವನ್ನೂ ತೋರಿಸಿರಲಿಲ್ಲ. ಎಲ್ಲ ರಾಜಂದಿರೂ ಅನೇಕ ಕ್ಷೇತ್ರಗಳಿಗೆ ಹಲವು ಭೂಸೊತ್ತುಗಳನ್ನು ನೀಡಿದ್ದರು. ಇಂದಿಗೂ ಭಾರತದ ವಿವಿಧ ಕ್ಷೇತ್ರ ಪೂಜಾರಿಗಳ ಬಳಿ ಔರಂಗಝೇಬ್‌ರ ಸಹಿಯಿರುವ ರಾಜಾಜ್ಞೆ ಗಳಿವೆ. ಅವು ಔರಂಗಝೇಬನು ಪಾರಿತೋಷಕ ಮತ್ತು ಜಮೀನುಗಳನ್ನು ನೀಡಿರುವುದರ ದಾಖಲೆಗಳಾಗಿವೆ. ಇಂತಹ ಎರಡು ಆಜ್ಞೆಗಳು ಈಗಲೂ ಅಲಹಾಬಾದ್‌ನಲ್ಲಿವೆ. ಆ ಪೈಕಿ ಒಂದು ಸೋಮನಾಥ ದೇವಾಲಯದ ಪೂಜಾರಿಯ ವಶದಲ್ಲಿದೆ.

ಔರಂಗಝೇಬ್ ಹೊರಡಿಸಿದ ಹಲವು ಸಾರ್ವಜನಿಕ ಫರ್ಮಾನುಗಳಲ್ಲಿ, ಹಿಂದೂ

ಸಹೋದರರ ಆರಾಧನಾಕರ್ಮಗಳಿಗೆ ಅಡ್ಡಿಯುಂಟು ಮಾಡಬಾರದೆಂಬ ವಿಶೇಷ ಎಚ್ಚರಿಕೆ ಕಂಡು ಬರುತ್ತದೆ. 'ಈ ಶುಭ ಮುಹೂರ್ತದಲ್ಲಿ' ನಮ್ಮ ಆಜ್ಞೆಯೇನೆಂದರೆ, ರಂಜೀವನೆಂಬ ಪುರೋಹಿತನ ನಿವಾಸದ ಮುಂಭಾಗದಲ್ಲಿ, ಗಂಗಾ ತೀರದ ಬನೀಮಾಧವ ಕಡವಿನ ಸಮೀಪ ಹಾಗೂ ಅಲ್ಲಿನ ಪ್ರಧಾನ ಮಸೀದಿಯ ಬದಿಯಲ್ಲಿ ಹರಡಿಕೊಂಡಿರುವ 588½ ದಿರ ವಿಸ್ತೀರ್ಣದ ಸ್ಥಳವೂ ಅವುಗಳ ಮೇಲ್ಭಾಗದಲ್ಲಿರುವ ಇನ್ನೊಂದು ಸ್ಥಳವೂ ಜನವಾಸ ಅಥವಾ ಕಟ್ಟಡಗಳಿಲ್ಲದೇ ಖಾಲಿಯಾಗಿದೆ. ಅಲ್ಲಿಗೆ ಬರುವ ಹಿಂದುಗಳನ್ನು ಕೆಲವರು ಬೆದರಿಸಿ ಓಡಿಸುತ್ತಿದ್ದಾರೆ ಮತ್ತು ಅಲ್ಲಿ ಅಕ್ರಮ ಪ್ರವೇಶ ನಡೆಸುತ್ತಿರುವರೆಂಬ ಸುದ್ದಿ ನಮಗೆ ಬಂದಿದೆ. ಆ ಸ್ಥಳದಲ್ಲಿರುವ ಬ್ರಾಹ್ಮಣರನ್ನು ಅಥವಾ ಇತರ ಹಿಂದುಗಳನ್ನು ಇನ್ನು ಮುಂದೆ ಯಾರೂ ಬೆದರಿಸಿ ಪೀಡಿಸಬಾರದು, ಹಿಂದಿನಂತೆಯೇ ಅವರು ತಮ್ಮ ಕೆಲಸ ಕಾರ್ಯಗಳನ್ನು ಸುಗಮವಾಗಿ ನಿರ್ವಹಿಸುತ್ತಾ ದೇವದತ್ತವಾಗಿರುವ ಮತ್ತು ಅನಾದಿ ಕಾಲದ ತನಕ ಉಳಿಯಬೇಕಾದ ನಮ್ಮ ರಾಷ್ಟ್ರದ ಕ್ಷೇಮಾಭಿವೃದ್ಧಿಗಾಗಿ ಪ್ರಾರ್ಥಿಸುವುದಕ್ಕೆ ಯಾವ ರೀತಿಯಲ್ಲಿಯೂ ಅಡ್ಡಿಯುಂಟು ಮಾಡಬಾರದು.

**(ಬಂಗಾಳ್ ಏಷ್ಯಾಟಿಕ್ ಸೊಸೈಟಿ ಜರ್ನಲ್, 1911 ಪುಟ: 689)**

**[ಹಿಜರಿ 1069 ಜುಮಾದಿಲ್ ಆಖಿರ್ 15 (A.D.1659)]**

ಪ್ರವಾದಿಯವರ ಕಾಲದಿಂದ ಈ ತನಕ ಇಸ್ಲಾಮೀ ಆಡಳಿತದ ಆಶ್ರಯದಲ್ಲಿ ಮುಸ್ಲಿಮೇತರ ಸಹೋದರರಿಗೆ ಆರಾಧನಾ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ನೀಡಲಾಗುತ್ತಿತ್ತು. ಪಾಕಿಸ್ಥಾನ, ಬಾಂಗ್ಲಾದೇಶ, ಇಂಡೋನೇಶ್ಯಾ, ಮಲೇಶ್ಯಾ, ಸಿರಿಯಾ, ಈಜಿಪ್ಟ್‌ನಂಥ ಎಲ್ಲ ಮುಸ್ಲಿಮ್ ರಾಷ್ಟ್ರಗಳಲ್ಲಿಯೂ ಮುಸ್ಲಿಮೇತರರಿಗೆ ಪೂರ್ಣ ಆರಾಧನಾ ಸ್ವಾತಂತ್ರವಿದೆ. ಧಾರ್ಮಿಕ ವಿದ್ವಾಂಸರಾಗಲಿ, ಸರಕಾರಗಳಾಗಲಿ ಅದರಲ್ಲಿ ಹಸ್ತಕ್ಷೇಪ ನಡೆಸುವುದಿಲ್ಲ.

ಪಾಕಿಸ್ತಾನದಲ್ಲಿ ಕೃಷ್ಣ ಜನ್ಮಾಷ್ಟಮಿ, ದೀಪಾವಳಿ ಮುಂತಾದ ಹಬ್ಬದ ದಿನಗಳಲ್ಲಿ ಹಿಂದೂ ಬಾಂಧವರಿಗೆ ಅಕ್ಕಿ, ಸಕ್ಕರೆ ಇತ್ಯಾದಿಗಳ ಖೋಟಾ ಹೆಚ್ಚಿಸಲಾಗುತ್ತದೆ. ಅದಲ್ಲದೆ, ಲಾಹೋರ್ ಜಿಲ್ಲೆಯ ಅಂಗೀಕೃತ ಶಾಲಾ ಕಾಲೇಜುಗಳಲ್ಲಿ ಕಲಿಯುವ ಅಲ್ಪಸಂಖ್ಯಾತ ಸಮುದಾಯದ ವಿದ್ಯಾರ್ಥಿಗಳಿಗೆ ಸರಕಾರವು ಸ್ಕಾಲರ್ ಶಿಪ್ ನೀಡುತ್ತಲಿದೆ. ಲಾಹೋರ್‌ನ ಕ್ರೈಸ್ತಧರ್ಮೀಯರಿಗೆ ದಫನ ಭೂಮಿ ನಿರ್ಮಾಣಕ್ಕೆ ಸರಕಾರವು ಆರ್ಥಿಕ ನೆರವು ನೀಡಿದೆ.

ಬಾಂಗ್ಲಾದೇಶದ ಸ್ಥಿತಿಯೂ ಭಿನ್ನವಾಗಿಲ್ಲ. ಕೆಲವು ವರ್ಷಗಳ ಹಿಂದೆ ಅಲ್ಲಿಂದ ಬಂದ ವಾರ್ತೆಯೊಂದು ಹೀಗಿತ್ತು: ಬಾಂಗ್ಲಾದೇಶದ ಹಿಂದೂ ದೇವಾಲಯ ಮತ್ತು ಧಾರ್ಮಿಕ ಸಂಸ್ಥೆಗಳ ಪುನರುದ್ಧಾರಕ್ಕಾಗಿ ಸರಕಾರವು 6 ಲಕ್ಷ ರೂ. ಮಂಜೂರು ಮಾಡಿದೆ. ಈ ನಿರ್ಧಾರ ಕೈಗೊಂಡ ಕಾನೂನು ಮತ್ತು ಧಾರ್ಮಿಕ ವ್ಯವಹಾರಗಳ ಸಚಿವ ಕೆ.ಎಮ್. ನೂರುಲ್ ಇಸ್ಲಾಮ್‌ರು, ನಾವು ಎಲ್ಲ ಧರ್ಮಗಳ ಹಿತಚಿಂತಕರಾಗಿರುವೆವೆಂದು ತಿಳಿಸಿದರು. **(ಮಾತೃಭೂಮಿ, 4-10-85)**

ಮಸ್ಕತ್, ಬಹ್‌ರೈನ್, ದುಬೈ ಮುಂತಾದ ಅರಬ್ ಮುಸ್ಲಿಮ್ ರಾಷ್ಟ್ರಗಳಲ್ಲಿ ಅಲ್ಲಿನ ಧಾರ್ಮಿಕ ಅಲ್ಪಸಂಖ್ಯಾತರು ವಿಶ್ವಾಸ-ಆರಾಧನಾ ಸ್ವಾತಂತ್ರ್ಯವೂ ಸೇರಿ ಎಲ್ಲ ರೀತಿಯ ಸೌಲಭ್ಯಗಳನ್ನೂ ಹೊಂದಿರುವರೆಂಬುದು ನಿರ್ವಿವಾದವಾಗಿದೆ. ಆರೆಸ್ಸೆಸ್‌ನ ಮಲಯಾಳ ಪತ್ರಿಕೆ 'ಕೇಸರಿ' ಸ್ವತಃ ಹೀಗೆ ಬರೆದಿದೆ: "ಮಸ್ಕತ್, ಬಹರೈನ್, ದುಬೈ ಮೊದಲಾದ ಗಲ್ಫ್ ರಾಷ್ಟ್ರಗಳು ವಿದೇಶಿ ಆಡಳಿತಾಧೀನವಿದ್ದ ಕಾಲದಿಂದಲೂ ಭಾರತೀಯರು ಮತ್ತು ಹಿಂದು ಗಳಾದ ಸಿಂಧೀ ಜನರು ಅಲ್ಲಿ ವ್ಯಾಪಾರಾರ್ಥ ನೆಲೆಸಿದ್ದರಿಂದ ಆ ರಾಷ್ಟ್ರಗಳ ಅಭಿವೃದ್ಧಿಯಲ್ಲಿ ಗಣ್ಯಪಾತ್ರ ವಹಿಸಿದ್ದರು. ಈ ವಾಸ್ತವಿಕತೆಯನ್ನು ಮನಗಂಡು ಅಲ್ಲಿನ ಆಡಳಿತಗಾರರು ಅವರಿಗೆ ವಿಶೇಷ ಮಾನ್ಯತೆ ನೀಡಿದ್ದರು." **(ಕೇಸರಿ 6-4-86)**

"ದುಬೈಯ ಶೇಖ್‌ರು ಅವರಿಗೆ (ಹಿಂದುಗಳಿಗೆ) ಅವಶ್ಯಕ ಸೌಲಭ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ವಿಶೇಷ ಆಸಕ್ತಿ ಹೊಂದಿದ್ದಾರೆ. ಸಿಂಧೀಯರ ಅಗತ್ಯಕ್ಕಾಗಿ ಹಿಂದೂ ದೇವಾಲಯ ಮತ್ತು ಇಷ್ಟದೇವತೆಗಳನ್ನು ಇರಿಸಿ ಪೂಜಿಸುವ ಅನುಮತಿ ಹಾಗೂ ಉತ್ಸವಾದಿಗಳ ಆಚರಣೆಗೂ ಮನ್ನಣೆ ನೀಡಲಾಗಿದೆ. ಹಿಂದುಗಳ ಶವ ಸಂಸ್ಕಾರಕ್ಕಾಗಿ ಪ್ರತ್ಯೇಕ ರುದ್ರಭೂಮಿ ಯನ್ನೂ ಅನುಮತಿಸಲಾಗಿದೆ." **(Ibid 5-1-86)**

ಇನ್ನೊಂದು ಮುಸ್ಲಿಮ್ ರಾಷ್ಟ್ರವಾಗಿರುವ ಇಂಡೋನೇಶ್ಯಾದ ಕುರಿತು ಅದೇ ಸಾಪ್ತಾಹಿಕ ಹೀಗೆ ಬರೆದಿತ್ತು: "ಎಲ್ಲ ಜನ ವಿಭಾಗಗಳಿಗೂ ಆರಾಧನಾ ಸ್ವಾತಂತ್ರ್ಯವನ್ನು ನೀಡುವ ಇಂಡೋನೇಶ್ಯನ್ ಸಂವಿಧಾನವು ಆ ರಾಷ್ಟ್ರದ ಜಾತ್ಯತೀತ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ಇಸ್ಲಾಮ್, ಕ್ರೈಸ್ತ, ಬೌದ್ಧ ಮತ್ತು ಹಿಂದೂ ಹೀಗೆ 4 ಧರ್ಮಗಳಿಗೂ ಸರಕಾರವು ಸಮಾನ ಮನ್ನಣೆ ಮತ್ತು ಪ್ರೋತ್ಸಾಹ ನೀಡುತ್ತಿದೆ. ಅದಕ್ಕಾಗಿ ಸರಕಾರದ ಆಶ್ರಯದಲ್ಲಿ ವಿಶೇಷ ಖಾತೆಯೇ ಇದೆ. ಇಲ್ಲಿ ವಿವಿಧ ಧರ್ಮಾನುಯಾಯಿಗಳು ಪರಸ್ಪರ ಪ್ರೀತಿ ಸೌಹಾರ್ದದಿಂದ ಬಾಳುತ್ತಿದ್ದಾರೆ." **(Ibid 7-6-87)**

ಆಧುನಿಕ ಜಗತ್ತಿನ ಬಹುತೇಕ ರಾಷ್ಟ್ರಗಳಲ್ಲಿ ಅನುಮತಿಸಿರುವುದಕ್ಕಿಂತ ಅಧಿಕ ಅನುಕೂಲತೆ ಮತ್ತು ಸೌಲಭ್ಯಗಳನ್ನು, ಮುಸ್ಲಿಮ್ ರಾಷ್ಟ್ರಗಳು ಅಲ್ಲಿನ ಧಾರ್ಮಿಕ ಅಲ್ಪಸಂಖ್ಯಾತರಿಗೆ, ಒದಗಿಸುತ್ತಿವೆ. ರಾಷ್ಟ್ರದ ಅನ್ಯಧರ್ಮೀಯ ಪೌರರಿಗೆ ವಿಶ್ವಾಸ ಮತ್ತು ಆರಾಧನಾ ಸ್ವಾತಂತ್ರ್ಯವನ್ನು ನೀಡದ ಯಾವ ಮುಸ್ಲಿಮ್ ರಾಷ್ಟ್ರವೂ ಇಲ್ಲ. ಆ ಕುರಿತು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯು ಅನುಸರಿಸಿರುವ ಸ್ಪಷ್ಟ ಮತ್ತು ಖಚಿತ ಧೋರಣೆಯೇ ಇದಕ್ಕೆ ಕಾರಣವಾಗಿದೆ.

# ಆರಾಧನಾಲಯಗಳ ಪಾವಿತ್ರ್ಯ

ಎಲ್ಲ ಧರ್ಮಾನುಯಾಯಿಗಳ ಆರಾಧನಾಲಯಗಳೂ ಗೌರವಾರ್ಹವಾಗಿವೆ. ಅವುಗಳನ್ನು ಅವಮಾನಿಸಬಾರದು. ನಾಶಪಡಿಸಬಾರದು. ಮುಸ್ಲಿಮರ ಮಸೀದಿಗಳಂತೆಯೇ ಇತರ ಸಮುದಾಯಗಳ ಆರಾಧನಾ ಕೇಂದ್ರಗಳೂ ಸುರಕ್ಷಿತವಾಗಿರಬೇಕೆಂದು ಇಸ್ಲಾಮ್ ಬಯಸುತ್ತದೆ. ಅವು ನಾಶಗೊಳಿಸಲ್ಪಡದಿರಲಿಕ್ಕಾಗಿ ಭೂಮಿಯಲ್ಲಿ ಅವಶ್ಯಕ ಕ್ರಮ ಕೈಗೊಳ್ಳಲಾಗುವುದೆಂದು ಪವಿತ್ರ ಕುರ್‌ಆನ್ ತಿಳಿಸಿದೆ. **"ಅಲ್ಲಾಹನು ಜನರಲ್ಲಿ ಕೆಲವರನ್ನು ಬೇರೆ ಕೆಲವರ ಮೂಲಕ ನೀಗಿಸದಿರುತ್ತಿದ್ದರೆ ಅಲ್ಲಾಹನ ನಾಮವನ್ನು ಅತಿ ಹೆಚ್ಚಾಗಿ ಸ್ಮರಿಸಲಾಗುತ್ತಿರುವ ಆಶ್ರಮಗಳೂ ಇಗರ್ಜಿಗಳೂ ಯಹೂದಿಯರ ಆರಾಧನಾಲಯಗಳೂ ಮಸೀದಿಗಳೂ ಧ್ವಂಸಗೊಳ್ಳುತ್ತಿದ್ದುವು." (ಪವಿತ್ರ ಕುರ್‌ಆನ್, 22:40)**

ಮುಸ್ಲಿಮ್ ಆಡಳಿತಗಾರರು ಮತ್ತು ಸಮುದಾಯ ನಾಯಕರು ಅನ್ಯಧರ್ಮೀಯರ ಆರಾಧನಾಲಯಗಳ ಸಂರಕ್ಷಣೆಗೆ ಪ್ರತಿಜ್ಞಾಬದ್ಧರಾಗಿದ್ದಾರೆ. ಅವಿವೇಕ ಮತ್ತು ಭಾವಾವೇಶದಿಂದ ಮುಸ್ಲಿಮರು ಅವುಗಳನ್ನು ಮಸೀದಿಯಾಗಿ ಪರಿವರ್ತಿಸುವ ಅವಕಾಶ ದೊರೆಯಬಾರದೆಂಬ ನಿಷ್ಕರ್ಷೆ ಹಿಂದಿನ ಕಾಲದ ನಾಯಕರಲ್ಲಿತ್ತು.

ಪ್ರಥಮ ಖಲೀಫರಾದ ಹ.ಅಬೂಬಕರ್‌ರೊಡನೆ ರಾಷ್ಟ್ರದ ಕ್ರೈಸ್ತರು ತಮ್ಮ ನೂತನ ಚರ್ಚೊಂದನ್ನು ಉದ್ಘಾಟಿಸುವಂತೆ ವಿನಂತಿಸಿದರು. "ನಿಮ್ಮ ಧರ್ಮಾಚಾರದಂತೆ ನಮಾಝ್ ನಿರ್ವಹಿಸಿ ಉದ್ಘಾಟಿಸಿದರೆ ಸಾಕೆಂದೂ" ಪ್ರತ್ಯೇಕವಾಗಿ ತಿಳಿಸಿದ್ದರು. ಆಗ ಅಬೂಬಕರ್(ರ) ಹೀಗೆಂದರು: "ನಾನು ಉದ್ಘಾಟಿಸಿದರೆ ನನ್ನ ಕಾಲಾನಂತರ ನಿಜಸ್ಥಿತಿಯನ್ನು ಅರಿಯದವರು ಇದು ನಮ್ಮ ಖಲೀಫರು ನಮಾಝ್ ಮಾಡಿದ ಸ್ಥಳವೆಂದು ವಾದಿಸಿ ಅದು ಗಲಭೆಗೆ ಹೇತುವಾಗಬಹುದು."

ಖಲೀಫರ ಸಂದೇಹವನ್ನು ಗಂಭೀರವಾಗಿ ಪರಿಗಣಿಸಿ ಕ್ರೈಸ್ತ ಬಾಂಧವರು ಆ ಕಾರ್ಯಕ್ರಮವನ್ನು ಕೈಬಿಟ್ಟರು.

ಮಹಾನುಭಾವರಾದ ಉಮರ್ ಫಾರೂಕ್(ರ), ಫೆಲೆಸ್ತೀನ್‌ನಲ್ಲಿ ಶತಮಾನಗಳಿಂದ

ಅಸ್ತಿತ್ವದಲ್ಲಿದ್ದ ಸಾಮ್ರಾಜ್ಯಶಾಹಿತ್ವವನ್ನು ಕೊನೆಗೊಳಿಸಿದ್ದರು. ಅವರು ಹರ್ಕ್ಯುಲೆಸ್‌ನ ದುರಾಡಳಿತವನ್ನು ಕೊನೆಗೊಳಿಸಿ ಅಲ್ಲಿನ ಜನರಿಗೆ ನೆಮ್ಮದಿ ನೀಡಿದ್ದರು. ಆದ್ದರಿಂದಲೇ ಅಲ್ಲಿಗೆ ಭೇಟಿ ನೀಡಿದ ಖಲೀಫರನ್ನು ಅಲ್ಲಿನ ಪ್ರಜೆಗಳು ಪ್ರೀತ್ಯಾದರಗಳಿಂದ ಸ್ವಾಗತಿಸಿದ್ದರು. ಸ್ಥಳೀಯ ಕ್ರೈಸ್ತ ಪುರೋಹಿತನಾಗಿದ್ದ ಸಫರ್‌ನಿಯೂಸ್ ಮತ್ತು ಪರಿವಾರವು ಅದರಲ್ಲಿ ಮುಂಚೂಣಿಯಲ್ಲಿತ್ತು. ಖಲೀಫರು ಅವರ ಜತೆ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡು ತ್ತಿದ್ದಾಗ ಝುಹರ್ (ಮಧ್ಯಾಹ್ನ) ನಮಾಝ್‌ನ ವೇಳೆಯಾಯಿತು. ಈ ವಿಷಯವನ್ನು ತಿಳಿದ ಪೇಟ್ರಿಯಾರ್ಕಿಸ್, ಉಮರ್ ಮತ್ತು ಸಂಗಡಿಗರೊಡನೆ ಅಲ್ಲಿನ ಚರ್ಚ್‌ನಲ್ಲಿ ನಮಾಝ್ ಮಾಡುವಂತೆ ವಿನಂತಿಸಿದರು. ಆದರೆ ಸಫರ್‌ನಿಯೂಸಿಯ ಈ ವಿನಂತಿಯನ್ನು ಖಲೀಫರು ಕೃತಜ್ಞತೆಯಿಂದ ತಿರಸ್ಕರಿಸಿದರು. ಅದಕ್ಕೆ ಅವರು ನೀಡಿದ ಕಾರಣ ಹೀಗಿತ್ತು- "ನಾನು ಇಲ್ಲಿ ನಮಾಝ್ ಮಾಡಿದರೆ ಮುಂದೆ ಯಾರಾದರೂ ಅವಿವೇಕಿ ಮುಸ್ಲಿಮರು ಅದರ ವಾರೀಸು ಹಕ್ಕಿಗಾಗಿ ವಾದಿಸಿ ಅದನ್ನು ಮಸೀದಿಯಾಗಿ ಪರಿವರ್ತಿಸಲು ಪ್ರಯತ್ನಿಸಬಹುದು." ಅಂತಹ ಅಕ್ರಮಕ್ಕೆ ಅವಕಾಶವಾಗಬಾರದೆಂಬ ಮುಂದಾಲೋಚನೆಯಿಂದ ಉಮರ್ ಫಾರೂಕ್(ರ), ಚರ್ಚ್‌ನ ಹೊರಗಿನ ಖಾಲಿಸ್ಥಳದಲ್ಲಿ ಬಟ್ಟೆ ಹಾಸಿ ನಮಾಝ್ ಮಾಡಿದರು.

ಡಮಸ್ಕಸ್‌ನಲ್ಲಿ ಗ್ರೀಕರ ಜುಪಿಟರ್ ಮೂರ್ತಿಯಿರಿಸಿದ ಒಂದು ಬೃಹತ್ ಆರಾಧನಾಲಯವಿತ್ತು. ಕ್ರೈಸ್ತರು ಆ ಪ್ರದೇಶವನ್ನು ಸ್ವಾಧೀನ ಪಡಿಸಿದ ಬಳಿಕ ಅದನ್ನು ಯೋಹಾನನ ನಾಮದ ಚರ್ಚ್ ಆಗಿ ಮಾರ್ಪಡಿಸಿದರು. ಉಮರ್ ಫಾರೂಕ್‌ರ ಕಾಲದಲ್ಲಿ ಆ ಪ್ರದೇಶವು ಇಸ್ಲಾಮೀ ರಾಷ್ಟ್ರದ ಭಾಗವಾಯಿತು. ತರುವಾಯ ಯೋಹಾನನ ಚರ್ಚನ್ನು ಬಳಸುತ್ತಿದ್ದ ಡಮಸ್ಕಸ್‌ನ ಬಹುವಂಶ ನಿವಾಸಿಗಳು ಇಸ್ಲಾಮ್ ಸ್ವೀಕರಿಸಿದರು. ಆದ್ದರಿಂದ ಅದನ್ನು ಮಸೀದಿಯಾಗಿ ಪರಿವರ್ತಿಸಬೇಕೆಂಬ ಒತ್ತಾಯ ತೀವ್ರವಾಯಿತು. ಆದರೂ ಇಸ್ಲಾಮೀ ಸರಕಾರ ಅದಕ್ಕೆ ಒಪ್ಪಲಿಲ್ಲ. ಚರ್ಚ್ ಬಳಸುವ ಕೊನೆಯ ವ್ಯಕ್ತಿಯೂ ಇಸ್ಲಾಮ್ ಸ್ವೀಕರಿಸಬೇಕು ಅಥವಾ ಅದರ ಹಕ್ಕುದಾರರು ಮನಃಪೂರ್ವಕ ಅದನ್ನು ತೆರವುಗೊಳಿಸಬೇಕು. ಅನ್ಯಥಾ ಅದು ಅಸಾಧ್ಯವೆಂಬ ಧೋರಣೆಯನ್ನು ಇಸ್ಲಾಮೀ ನಾಯಕರು ಹೊಂದಿದ್ದರು.

ತರುವಾಯ ಮುಸ್ಲಿಮರು ಮತ್ತು ಕ್ರೈಸ್ತರು ಪರಸ್ಪರ ಚರ್ಚಿಸಿ ನಿರ್ಧರಿಸಿದ ಪ್ರಕಾರ ಉಭಯ ವಿಭಾಗಗಳೂ ತಂತಮ್ಮ ಆರಾಧನಾ ಕರ್ಮಗಳಿಗಾಗಿ ಅದನ್ನು ಬಳಸುತ್ತಲಿದ್ದವು. ಒಂದೆಡೆ ಮುಸ್ಲಿಮರು ನಮಾಝ್ ನಿರ್ವಹಿಸುವಾಗ ಇನ್ನೊಂದೆಡೆ ಕ್ರೈಸ್ತರು ತಮ್ಮ ಪ್ರಾರ್ಥನೆ ಗಳನ್ನು ನಿರ್ವಹಿಸುತ್ತಿದ್ದರು. ಹೀಗೆ ಸುದೀರ್ಘ ಕಾಲ ಅದನ್ನು ಉಪಯೋಗಿಸಲಾಯಿತು.

ವಲೀದ್ ಬಿನ್ ಅಬ್ದುಲ್ ಮಲಿಕ್‌ರ ಆಡಳಿತಕಾಲದಲ್ಲಿ ಮದೀನಾ ಮತ್ತು ಫೆಲೆಸ್ತೀನ್

ಮಸೀದಿಗಳೊಂದಿಗೆ ಅದನ್ನು ನವೀಕರಿಸಲು ನಿರ್ಧರಿಸಲಾಯಿತು. ಕ್ರೈಸ್ತರು ಅದಕ್ಕೆ ಸಮ್ಮತಿಸಿ ಅದನ್ನು ಮಸೀದಿಯಾಗಿ ಪರಿವರ್ತಿಸಲು ಸಂಪೂರ್ಣ ಒಪ್ಪಿಗೆ ನೀಡಿದರು. ಅದಕ್ಕೆ ಪ್ರತಿಯಾಗಿ ಮರ್ಯಮ್ ಚರ್ಚನ್ನು ನವೀಕರಿಸಿ ಕೊಡಲಾಯಿತು.

ವಲೀದ್‌ರು ಬೃಹತ್ ಯೋಜನೆಯನ್ವಯ ನಿರ್ಮಾಣ ಕಾರ್ಯ ಆರಂಭಿಸಿದರು. ಅದು ಸಂಪೂರ್ಣವಾಗಲು 20 ವರ್ಷ ಹಿಡಿಯಿತು. 1500 ಕೆಲಸಗಾರರು ಅದರ ನಿರ್ಮಾಣದಲ್ಲಿ ಭಾಗವಹಿಸಿದ್ದರು. ರೋಮ್‌ನಿಂದಲೂ ವಿಶೇಷ ತಜ್ಞರನ್ನು ಕರೆತರಲಾಗಿತ್ತು. ಅದರ ಮೇಲೆ ಸುಂದರ ಕುಂಭಗೋಪುರವನ್ನು ನಿರ್ಮಿಸಿದ್ದರು. ನೆಲಕ್ಕೆ ಬಿಳಿಶಿಲೆ ಹಾಸಿ, ಗೋಡೆಗಳನ್ನು ಆಕರ್ಷಕ ಕೆತ್ತನೆ ಕೆಲಸಗಳಿಂದ ಅಲಂಕರಿಸಲಾಯಿತು. ವಲೀದ್‌ರು ಅದರ ನಿರ್ಮಾಣಕ್ಕಾಗಿ 1 ಕೋಟಿ 60 ಲಕ್ಷ ದಿನಾರ್ ವ್ಯಯಿಸಿದರು. ಆದರೂ ಕೆಲಸ ಪೂರ್ಣ ಗೊಳ್ಳಲಿಲ್ಲ. ಅವರ ಸಹೋದರ ಸುಲೈಮಾನ್‌ರ ಕಾಲದಲ್ಲಿ ಅದರ ನಿರ್ಮಾಣಕಾರ್ಯ ಪೂರ್ಣಗೊಂಡಿತು.

ಉಮರ್ ಬಿನ್ ಅಬ್ದುಲ್ ಅಝೀಝ್‌ರು ಇಸ್ಲಾಮೀ ಆಡಳಿತದ ಉಜ್ವಲ ಮಾದರಿ ಯಾಗಿ ಶೋಭಿಸಿದ ಮಹಾರಥರಲ್ಲಿ ಅಗ್ರಗಣ್ಯರಾಗಿದ್ದಾರೆ. ಅವರು ಅಧಿಕಾರವಹಿಸಿದಾಗ ಅವರ ನ್ಯಾಯನಿಷ್ಠೆ ಮತ್ತು ಪರಮತ ಸಹಿಷ್ಣುತೆಯ ಬಗ್ಗೆ ದೃಢ ವಿಶ್ವಾಸವಿದ್ದ ಕ್ರೈಸ್ತ ಸಮುದಾಯವು ಮಸೀದಿಯನ್ನು ಕೆಡಹಿ ಯೋಹಾನನ ಚರ್ಚನ್ನು ಪುನರ್ನಿರ್ಮಿಸ ಬೇಕೆಂದು ಒತ್ತಾಯಿಸಿತು. ವಲೀದ್‌ರ ಕಾಲದಲ್ಲಿ ಬಲವಂತಕ್ಕೆ ಕಟ್ಟುಬಿದ್ದು ನಾವು ಅದನ್ನು ಬಿಟ್ಟುಕೊಡಬೇಕಾಯಿತೆಂದು ಅವರು ವಾದಿಸಿದರು. ಆ ಕಾಲದ ಅತಿದೊಡ್ಡ ಹಾಗೂ ಅತ್ಯದ್ಭುತವಾಗಿದ್ದ ಮಸೀದಿಯನ್ನು ಕೆಡಹಿ ಚರ್ಚ್ ನಿರ್ಮಿಸುವುದು, ಅದು ಕೂಡಾ ಸರ್ವ ಪರಮಭಕ್ತನಾದ ಮುಸ್ಲಿಮ್ ಆಡಳಿತಗಾರ! ಸಾಮಾನ್ಯ ನಂಬಿಕೆಯಂತೆ ಅದನ್ನು ಊಹಿಸಲೂ ಸಾಧ್ಯವಿರಲಿಲ್ಲ. ಆದರೆ ಆದರ್ಶ ನಿಷ್ಠರಾಗಿದ್ದ ಖಲೀಫರು ಎಲ್ಲ ಕಾಲಗಳ ಸದ್ಭಕ್ತರಂತೆಯೇ ನ್ಯಾಯವನ್ನು ಪಾಲಿಸಿದರು. ಸತ್ಯವಿಶ್ವಾಸಿಗಳಿಗೆ ಸಂಕುಚಿತ ಮತ್ತು ಪಕ್ಷಪಾತೀ ಮನೋಭಾವವನ್ನು ಬೆಳೆಸಲು ಸಾಧ್ಯವಿಲ್ಲ. ಉಮರ್ ಬಿನ್ ಅಬ್ದುಲ್ ಅಝೀಝ್‌ರು ಮಸೀದಿ ಕೆಡವಿ ಚರ್ಚ್ ನಿರ್ಮಿಸುವಂತೆ ಆಜ್ಞಾಪಿಸಿದರು. ಕ್ರೈಸ್ತರು ವಲೀದ್‌ರ ಕಾಲದಲ್ಲಿ ಸ್ವಇಚ್ಛೆಯಿಂದ ಬಿಟ್ಟುಕೊಟ್ಟುದರಿಂದ ಮಸೀದಿಯನ್ನು ನಿರ್ಮಿಸಲಾಗಿದ್ದುದ್ದರಿಂದ ಆಜ್ಞೆಯನ್ನು ಹಿಂತೆಗೆಯಬೇಕೆಂದು ಮುಸ್ಲಿಮರು ಬಲವಾಗಿ ವಾದಿಸಿದರು. ಆದರೂ ಖಲೀಫರು ಜಗ್ಗಲಿಲ್ಲ. ಅವರು ತಮ್ಮ ದಿಟ್ಟ ನಿರ್ಧಾರದಲ್ಲಿಯೇ ಅಚಲರಾಗಿ ನಿಂತರು. ಕೊನೆಗೆ ಮುಸ್ಲಿಮರು ಕ್ರೈಸ್ತರ ಮನವೊಲಿಸಿ ಉಭಯ ವಿಭಾಗಗಳು ಸಿನಂತಿಸಿದ ಬಳಿಕವೇ ಅವರು ಮಸೀದಿಯನ್ನು ಯಥಾವತ್ತಾಗಿ ಉಳಿಸುವ ಒಪ್ಪಿಗೆ ನೀಡಿದರು.

ಇಸ್ಲಾಮೀ ರಾಷ್ಟ್ರದಲ್ಲಿ ಯಾವಾಗಲೂ ಎಲ್ಲೆಡೆಯೂ ಸಹೋದರ ಸಮುದಾಯಗಳ

ಆರಾಧನಾಲಯಗಳು ಸಂಪೂರ್ಣ ಸುರಕ್ಷಿತವಾಗಿದ್ದುವು. ಸ್ವಂತ ಧರ್ಮಾನುಯಾಯಿ ಗಳಾಗಿದ್ದ ಮುಸ್ಲಿಮರಾಗಲಿ ಅಥವಾ ಇತರರಿಗಾಗಲಿ ಅದರಲ್ಲಿ ಹಸ್ತಕ್ಷೇಪ ನಡೆಸು ಅವಕಾಶವಿರಲಿಲ್ಲ. ಅದೇ ವೇಳೆ ಅನ್ಯ ಧರ್ಮಾನುಯಾಯಿಗಳಿಗೆ ಅವರ ಇಷ್ಟಪ್ರಕಾ ದೇವಾಲಯಗಳನ್ನು ನಿರ್ಮಿಸುವ ಹಕ್ಕು ಮತ್ತು ಅನುಮತಿಯನ್ನು ನೀಡಲಾಗಿತ್ತು ಆದ್ದರಿಂದ ಮುಸ್ಲಿಮ್ ರಾಷ್ಟ್ರಗಳಲ್ಲಿ ವಿವಿಧ ಧರ್ಮಾನುಯಾಯಿಗಳ ಆರಾಧನಾ ಕೇಂದ್ರಗಳ ನಿಕಟವಾಗಿರುವುದು ಕಂಡು ಬರುತ್ತದೆ. ಆದ್ದರಿಂದಲೇ ಮಧ್ಯಪ್ರಾಚ್ಯದಲ್ಲಿ ಆಡಳಿ ನಡೆಸುತ್ತಿದ್ದ ವಿವಿಧ ರೋಮ್-ಪರ್ಶಿಯನ್ ಸಾಮ್ರಾಜ್ಯ ಶಕ್ತಿಗಳ ಹಿಂಸೆಗೆ ಗುರಿಯಾ ಕಷ್ಟ ಅನುಭವಿಸುತ್ತಿದ್ದ ಯಹೂದಿಗಳು ಮತ್ತು ಕ್ರೈಸ್ತರು ಹಾಗೂ ಮಜೂಸಿಗಳಿಗೆ ಮುಸ್ಲಿಮ ಉಪಸ್ಥಿತಿಯು ಅಪಾರ ನೆಮ್ಮದಿಯನ್ನು ನೀಡಿತ್ತು. ಅವಿವೇಕಿಗಳಾದ ಜನಸಾಮಾನ್ಯರ ಅನ್ಯಧರ್ಮೀಯರ ಆರಾಧನಾಲಯಗಳನ್ನು ಅನಾದರಿಸುವ ಸಾಧ್ಯತೆ ಅಧಿಕವಿರುವು ರಿಂದ ಆ ಬಗ್ಗೆ ಕಟ್ಟೆಚ್ಚರ ವಹಿಸಬೇಕೆಂದು ಆಡಳಿತಗಾರರು, ರಾಜ್ಯಪಾಲರಿಗೂ ಅಧಿಕಾ ಗಳಿಗೂ ಪದೇ ಪದೇ ನೆನಪಿಸುತ್ತಿದ್ದರು. ಖಲೀಫರ ಪತ್ರ ಮತ್ತು ಫರಮಾನುಗಳನ ನೋಡಿದರೆ ಇದು ವ್ಯಕ್ತವಾಗುತ್ತದೆ. ಉಮರ್ ಬಿನ್ ಅಬ್ದುಲ್ ಅಝೀಝ್ರ ಅಬ್ದುರ್ರಹ್ಮಾನ್ ಬಿನ್ ನಈಮ್‌ರಿಗೆ ಹೀಗೆ ಬರೆದಿದ್ದರು: "ನೀವು ಚರ್ಚ್, ಮಠ ಮತ ಮಜೂಸಿಗಳ ಹೋಮ ಕುಂಡಗಳನ್ನು ನಾಶಪಡಿಸಬಾರದು."

ಭಾರತದಲ್ಲಿ ಮುಸ್ಲಿಮ್ ಸಾಮ್ರಾಜ್ಯದ ಮೂಲ ಪುರುಷನಾದ ಮುಹಮ್ಮದ್ ಬಿ ಕಾಸಿಮ್ ಸಿಂಧ್ ನಿವಾಸಿಗಳೊಡನೆ ಮಾಡಿಕೊಂಡ ಒಪ್ಪಂದದಲ್ಲಿ ಹೀಗೆ ಹೇಳಲಾಗಿ "ಹಿಂದುಗಳ ಕ್ಷೇತ್ರಗಳೂ, ಮಸೀದಿ ಮತ್ತು ಯಹೂದಿ ದೇವಾಲಯಗಳೂ ಮಾಹಿಯಾನ ಅಗ್ನಿ ದೇವಾಲಯಗಳೂ ಸರಿಸಮಾನವಾಗಿವೆ."

**(ಸಯ್ಯಿದ್ ಸುಲೈಮಾನ್ ನದ್**

**'ಅರಬ್ ಔರ್ ಹಿಂದ್ ಕೆ ತಅಲ್ಲುಕಾತ್' ಪುಟ: 194**

"ಅವರು (ಮುಹಮ್ಮದ್ ಬಿನ್ ಕಾಸಿಮ್) ಪುರಪ್ರಮುಖರು, ದೇಶವಾಸಿಗಳು ಮತ ಬ್ರಾಹ್ಮಣರೊಡನೆ ತಂತಮ್ಮ ಆರಾಧನಾಲಯಗಳನ್ನು ನಿರ್ಮಿಸಿ ಮುಸ್ಲಿಮರೊಡ ನಿರ್ಭೀತಿಯಿಂದ ಬೆರೆತು ಬಾಳಿ, ತಮ್ಮ ಪ್ರಗತಿಗಾಗಿ ದುಡಿಯುವಂತೆ ಆದೇಶಿಸಿದರು ಮತಾಂಧ ಬ್ರಾಹ್ಮಣರೊಡನೆ ಅವರು ದಯೆಯಿಂದ ವರ್ತಿಸಿ ಅವರ ಪೂರ್ವಜರ ಆಚಾ ಕರ್ಮಗಳನ್ನು ಮಾನ್ಯಮಾಡಿ ಹಳೆಯ ಸಂಪ್ರದಾಯದಂತೆ ಕಾಣಿಕೆ ಮತ್ತು ದೇಣಿಗೆಗಳನ ನೀಡಿದರು." **(ಈಲಿಯಲ್, ಸಂಪುಟ: 1, ಪುಟ: 186**

ಮುಹಮ್ಮದ್ ಬಿನ್ ಕಾಸಿಮ್‌ರ ಸೇನಾ ಕಾರ್ಯಾಚರಣೆಯಲ್ಲಿ ಹಾನಿಗೀಡಾ ದೇವಾಲಯಗಳನ್ನು ಪುನರ್ನಿರ್ಮಿಸುವಂತೆ ಖಲೀಫರು ಆಜ್ಞಾಪಿಸಿ, ಅವರು ಅದನ

ಯರ್ಗತಗೊಳಿಸಿದರೆಂದು ಇತಿಹಾಸ ದಾಖಲೆಗಳಲ್ಲಿವೆ.

(S.M.Jafar: Islamic Culture P: 109)

ಭಾರತದ ಮುಸ್ಲಿಮ್ ಆಡಳಿತಗಾರರಲ್ಲಿ ಅತ್ಯಧಿಕ ಅಸಹಿಷ್ಣುತೆಯ ಆರೋಪಕ್ಕೆ ಗುರಿಯಾಗಿರುವ ಔರಂಗಜೇಬರು ಯಾವುದೇ ದೇವಾಲಯವನ್ನೂ ನಾಶಪಡಿಸಿಲ್ಲ, ಮಾತ್ರವಲ್ಲ ಲವು ದೇವಾಲಯಗಳಿಗೆ ಅಪಾರ ನೆರವು ನೀಡಿದ್ದಾರೆ. ಅವರು ಸೋಮೇಶ್ವರ ಮಹಾ ೇವಾಲಯಕ್ಕೆ ಭೂಸೊತ್ತು ಮತ್ತು ಹಣವನ್ನು ದಾನವಾಗಿ ನೀಡಿದ ಚಾರಿತ್ರಿಕ ದಾಖಲೆ ಇವೆ. ಹಾಗೆಯೇ ವಾರಣಾಸಿಯ ಜಂಗಂಬಾಡಿ ಶಿವಾಲಯಕ್ಕೆ ಔರಂಗಜೇಬ್ ಜಮೀನು ಡಿ ಆಜ್ಞೆ ಹೊರಡಿಸಿದ ದಾಖಲೆಗಳು ಈಗಲೂ ಅಲ್ಲಿನ ಮಹಂತರ ಬಳಿಯಿದೆ. ಗಿರ್ನಾರ್ ತ್ತು ಅಬೂವಿನ ದೇವಾಲಯಗಳಿರುವ ಸ್ಥಳವು ಅವುಗಳ ನಿರ್ಮಾಣಕ್ಕಾಗಿ ಔರಂಗಜೇಬರೇ ಡಿದ್ದಾಗಿದೆ. ಶತ್ರುಂಜಯ ಕ್ಷೇತ್ರವೂ ಸೇರಿದಂತೆ ಹಲವು ಹಿಂದೂ ದೇವಾಲಯಗಳಿಗೂ ಲ್ಲಿನ ಪೂಜಾರಿಗಳಿಗೂ ಅವರು ಬಹಳಷ್ಟು ವಿನಾಯಿತಿಗಳನ್ನು ನೀಡಿದ್ದರು.

(ಹೆಚ್ಚಿನ ವಿವರಗಳಿಗೆ ಬಿ.ಎನ್.ಪಾಂಡೆ ಬರೆದ

Islam & Indian Culture (ಪುಟ: 58-73) ನೋಡಿರಿ)

ಅನ್ಯಧರ್ಮೀಯರ ಆರಾಧನಾಲಯಗಳನ್ನು ಅಗೌರವಿಸಬಾರದು, ಧ್ವಂಸಗೊಳಿಸ ರದೆಂದು ನಿಷ್ಠುರವಾಗಿ ಆದೇಶಿಸಿರುವ ಇಸ್ಲಾಮಿನ ಯಾವೊಬ್ಬ ನಿಷ್ಠಾವಂತ ುಯಾಯಿಯೂ ದೇವಳ, ಚರ್ಚ್ ಅಥವಾ ಮಠಗಳನ್ನು ನಾಶಗೊಳಿಸಿದ ಉದಾಹರಣೆ ತಿಹಾಸದಲ್ಲಿ ಒಂದಾದರೂ ದೊರೆಯಲಾರದು. ಆದರೆ, ಧರ್ಮನಿಷ್ಠೆಯಿಲ್ಲದ, ್ರಮಣಗಾರ ಮತ್ತು ಧನಮೋಹಿಯಾಗಿದ್ದ ಮುಹಮ್ಮದ್ ಘಜ್ನಿ ಹಲವು ಕ್ಷೇತ್ರಗಳನ್ನು ಳ್ಳೆ ಹೊಡೆದ ವಾಸ್ತವಿಕತೆಯನ್ನು ಇಲ್ಲಿ ನಿರಾಕರಿಸುವಂತಿಲ್ಲ. ಆತನ ಈ ಕೃತ್ಯಗಳಿಗೆ ನಮೋಹ ಪ್ರೇರಕವಾಗಿತ್ತೇ ವಿನಾ ಧರ್ಮ ಸರ್ವಥಾ ಅಲ್ಲ.

ಮುಹಮ್ಮದ್ ಘಜ್ನಿ ಮುಲ್ತಾನದ ಸೂರ್ಯ ದೇವಾಲಯವನ್ನು ಕೊಳ್ಳೆ ಹೊಡೆದಿದ್ದ ದು ಡಾ| ಈಶ್ವರ ಪ್ರಸಾದ್ ದಾಖಲಿಸಿದ್ದಾರೆ. (History of Muslim Rule, P: 49) ದರಲ್ಲಿದ್ದ ಸಂಪತ್ತನ್ನು ಸಂಪೂರ್ಣವಾಗಿ ದೋಚಿದ್ದರೂ ಕ್ಷೇತ್ರಕ್ಕೆ ಯಾವುದೇ ಹಾನಿ ಡಿರಲಿಲ್ಲ. ಆದ್ದರಿಂದ ಇಲ್ಲಿ 4 ಅತಿ ಮಹತ್ವದ ಅಂಶಗಳು ವಿಶೇಷ ಗಮನಾರ್ಹವಾಗಿವೆ.

1. ಮುಹಮ್ಮದ್ ಘಜ್ನಿಯು ಕೇವಲ ಆರ್ಥಿಕ ಉದ್ದೇಶದಿಂದ ಧಾರ್ಮಿಕ ಕ್ಷೇತ್ರ ನ್ನು ಆಕ್ರಮಿಸಿ ದೋಚಿದ್ದನು. ಖ್ಯಾತ ಇತಿಹಾಸಗಾರ ಪಿ.ಥೋಮಸ್ ಹೀಗೆ ಬರೆದಿದ್ದಾರೆ: ರತದ ಎಲ್ಲ ರಾಜ್ಯಗಳಲ್ಲಿಯೂ ಆಯಾ ಪ್ರದೇಶಗಳ ಸೊತ್ತು ಸಂಪತ್ತುಗಳನ್ನು ಅಲ್ಲಿನ ವಾಲಯಗಳಲ್ಲಿ ಶೇಖರಿಸಿಡಲಾಗುತ್ತಿತ್ತೆಂಬ ಒಂದೇ ಅಂಶದಿಂದ ಬ್ರಾಹ್ಮಣ ಪೌರೋಹಿತ್ಯದ ಾವವನ್ನು ನಿರ್ಧರಿಸಬಹುದಾಗಿದೆ. ರಾಜಂದಿರ ಖಜಾನೆಗಳನ್ನು ಈ ದೇವಾಲಯಗಳ

ಸಂಪತ್ತಿಗೆ ಹೋಲಿಸಿದರೆ ಅವು ನಗಣ್ಯವಾಗಿದ್ದುವು. ಆ ಕಾರಣದಿಂದಲೇ ಅರಮನೆ
ಬದಲಾಗಿ ದೇವಾಲಯಗಳೇ ಮುಹಮದ್ ಘಜ್ನಿಯ ಆಕ್ರಮಣದ ಪ್ರಧಾನ ಗುರಿಯಾಗಿ

**(P.Thomas: Hindu Religio**

ಭೀಮ್‌ನಗರದ ಆಕ್ರಮಣದಲ್ಲಿ ಮುಹಮ್ಮದ್ ಘಜ್ನಿ ದೋಚಿದ ವಸ್ತುಗಳ ವಿವ
ಯಲ್ಲಿ ಹೀಗಿದೆ: "ಸುಲ್ತಾನನ ಸೈನಿಕರು ಹೊರಬಹುದಾದಷ್ಟು ಸೊತ್ತುಗಳನ್ನು ದೋಚಿದ
ಉಳಿದುದನ್ನು ಹಲವರು ಹಂಚಿಕೊಂಡರು. ಸುಲ್ತಾನ್‌ನಿಗೆ ದೊರೆತ ಕೇವಲ ಮು
ಬಂಗಾರದ ನಾಣ್ಯಗಳ ಬೆಲೆಯೇ ಎಂಟು ಕೋಟಿ ದಿರ್ಹಮ್‌ಗಳಾಗಬಹುದು. ಬಂಗ
ಮತ್ತು ಬೆಳ್ಳಿಯು 7,400 ಜನ ಹೊರುವಷ್ಟಿತ್ತು. ಅದಲ್ಲದೇ ಉತ್ತಮ ಬಟ್ಟೆಬರೆ ಇತ್ಯಾದಿ
ಹೇರಳವಾಗಿದ್ದುವು." **(Elliot & Dowson, Vol: 1, P; 3**

"ಉತ್ತರ ಮಥುರಾಪುರಿಯ ಶ್ರೀಕೃಷ್ಣ ಕ್ಷೇತ್ರದಿಂದ ಮುಹಮ್ಮದ್ ಘಜ್ನಿಗೆ ಬಂಗ
ದಿಂದ ನಿರ್ಮಿಸಿದ 5 ಗಜ ಉದ್ದದ 5 ವಿಗ್ರಹಗಳು ದೊರೆತುವು. ಅದರಲ್ಲಿ ಒಂ
ವಿಗ್ರಹದ ಕಣ್ಣನ್ನು ಎರಡು ಮಾಣಿಕ್ಯದ ಕಲ್ಲುಗಳಿಂದ ನಿರ್ಮಿಸಲಾಗಿತ್ತು. ಪ್ರತಿಯೊಂ
ಬೆಲೆ 50,000 ದೀನಾರ್‌ಗಳಾದೀತು. ಇನ್ನೊಂದು ವಿಗ್ರಹದ ಕಣ್ಣನ್ನು 450 ಮಿಸ್ಕಾ
(1 ಮಿಸ್ಕಾಲ್= 4.25 ಗ್ರಾಂ) ವೈಢೂರ್ಯದಿಂದ ನಿರ್ಮಿಸಲಾಗಿತ್ತು. ಮತ್ತೊಂದು ವಿಗ್ರ
ಕಾಲುಗಳು 4400 ಮಿಸ್ಕಾಲ್ ಭಾರವಿತ್ತು. ಈ ಐದು ವಿಗ್ರಹಗಳಲ್ಲಿ ಒಟ್ಟು 98,8
ಮಿಸ್ಕಾಲ್ ಚಿನ್ನವಿತ್ತು." **(Elliot & Dowson Vol: 2, P: 4**

ವಿವಿಧ ಧಾರ್ಮಿಕ ಕ್ಷೇತ್ರಗಳಿಂದ ಘಜ್ನಿ ಅಪಾರ ಸಂಪತ್ತನ್ನು ದೋಚಿದ್ದಾನೆ. ಅ
ಧನಮೋಹವೇ ಪ್ರೇರಕವಾಗಿತ್ತು. ಆದ್ದರಿಂದಲೇ ಆತನು ಆರಾಧನಾಲಯಗಳನ್ನು ಧ್ವ
ಗೊಳಿಸಿರಲಿಲ್ಲ.

2. ಮುಹಮ್ಮದ್ ಘಜ್ನಿ ಧರ್ಮಭಕ್ತ ಅಥವಾ ಧರ್ಮ ಪ್ರಚಾರಕನಾಗಿರಲಿ
ಸ್ವೇಚ್ಛಾಧಿಪತಿ ಮತ್ತು ಮರ್ದಕ ಆಡಳಿತಗಾರನೂ ತೀವ್ರ ಧನಮೋಹಿಯೂ ಆಗಿ
ವೈಯಕ್ತಿಕ ಜೀವನದಲ್ಲಿ ಆತ ಇಸ್ಲಾಮಿನ ಆರಾಧನಾ ಕರ್ಮಗಳನ್ನಾಗಲಿ, ಆಚಾರ
ಗಳನ್ನಾಗಲಿ ಪಾಲಿಸುತ್ತಿರಲಿಲ್ಲ. ಹೀಗಿರುವಾಗ ಆಡಳಿತ ವ್ಯವಹಾರಗಳ ಸ್ಥಿತಿಯನ್ನು ಕ
ಬೇಕಾಗಿಲ್ಲ. ಕಾಝಿ ಮುಗೀಸುದ್ದೀನ್ ಹೀಗೆಂದಿದ್ದಾರೆ: "ಮಧ್ಯಕಾಲೀನ ಶತಮಾನ
ಭಾರತದ ರಾಷ್ಟ್ರನಾಯಕನು ಮುಸ್ಲಿಮನಾಗಿದ್ದರೂ ರಾಷ್ಟ್ರವು ಇಸ್ಲಾಮ್ ಆಗಿರಲಿಲ್ಲ. ಪ
ಗ್ರಂಥಗಳಾದ ಕುರ್‌ಆನ್ ಮತ್ತು ಹದೀಸ್‌ಗಳ ಬೋಧನೆಗಳನ್ನಾಗಲಿ, ಸುನ್ನಿ ಕರ್ಮಶಾ
ನಾಲ್ಕು ವಿಧದಲ್ಲಿರುವ ಯಾವುದೇ ಕಾನೂನುಗಳನ್ನಾಗಲಿ ರಾಷ್ಟ್ರ ಅವಲಂಬಿಸಲಿಲ್ಲ. ಮ
ಕಾಲೀನ ಭಾರತವು ಧರ್ಮಾಧಿಷ್ಠಿತವಾಗಿತ್ತೆನ್ನುವುದು ಸರಿಯಲ್ಲ. ಏಕೆಂದರೆ, ಅದು ಮುಸ್ಲಿ
ವಿದ್ವಾಂಸರ ಮಾರ್ಗದರ್ಶನದಲ್ಲಿ ವ್ಯವಹರಿಸುತ್ತಿರಲಿಲ್ಲ."

**(B.N.Pande: Islam & Indian Culture, P:**

ಸಿ. ಅಚ್ಯುತ ಮೆನನ್ ಬರೆದಿದ್ದಾರೆ: "ವಸ್ತುತಃ ಮಧ್ಯಕಾಲೀನ ಸರಕಾರವು ಇಸ್ಲಾಮ್ ಧರ್ಮವನ್ನು ಜನರ ಮೇಲೆ ಹೇರಲು ಅಥವಾ ಇಸ್ಲಾಮಿ ಧರ್ಮಾಚಾರಗಳನ್ವಯ ಆಡಳಿತ ವ್ಯವಸ್ಥೆಯನ್ನು ಜಾರಿಗೊಳಿಸಲು ಪ್ರಯತ್ನಿಸಿಲ್ಲ." **(ಜನಯುಗ ಸಾಪ್ತಾಹಿಕ 26-11-78)**

3. ಮುಹಮ್ಮದ್ ಘಜ್ನಿಯ ಸೈನಿಕರಲ್ಲಿ ಅನೇಕ ಹಿಂದುಗಳಿದ್ದರು. ಕೆಲವು ಉನ್ನತ ಹುದ್ದೆಗಳಲ್ಲಿಯೂ ಅವರು ನೇಮಕಗೊಂಡಿದ್ದರು. ಇದರಿಂದಾಗಿ ದೇವಾಲಯ ಲೂಟಿಗೆ ಧರ್ಮದ್ವೇಷ ಕಾರಣವಲ್ಲವೆಂದು ಸ್ಪಷ್ಟವಾಗುತ್ತದೆ. ಡಾ। ಈಶ್ವರೀ ಪ್ರಸಾದ್ ಹೀಗೆ ಬರೆದಿದ್ದಾರೆ: "ಅವರ ಸೇನೆಯಲ್ಲಿ ಹಿಂದುಗಳ ತುಕಡಿಯಿತ್ತು. ಅನೇಕ ಸೇನಾಧಿಕಾರಿಗಳಿದ್ದರು. ಅವರ ಲಾಹೋರಿನ ರಾಜ್ಯಪಾಲನೂ ಓರ್ವ ಹಿಂದುವಾಗಿದ್ದ."

**(Dr. Iswari Prasad: 'Muslim rule in India)**

4. ಮುಹಮ್ಮದ್ ಘಜ್ನಿಯಂತೆಯೇ ಹಲವು ಹಿಂದೂ ರಾಜರೂ ಧನಮೋಹ ಮತ್ತು ರಾಜಕೀಯ ಹಿತಾಸಕ್ತಿಗಳಿಗಾಗಿ ದೇವಾಲಯಗಳನ್ನು ದೋಚಿ ನಾಶಪಡಿಸಿದ್ದಾರೆ. ಮರಾಠರು ಮತ್ತು ರಜಪೂತರು ಅನ್ಯರಾಜ್ಯಗಳ ಅನೇಕ ದೇವಾಲಯಗಳನ್ನು ದೋಚಿದ್ದರು.

"1791ರಲ್ಲಿ ರಘುನಾಥ ರಾವ್ ಪಟುವರ್ಧನನ ನಾಯಕತ್ವದಲ್ಲಿ ಮರಾಠ ಸೇನೆಯು ಪ್ರಖ್ಯಾತ ಶೃಂಗೇರಿ ಮಠವನ್ನು ದೋಚಿ ಅನೇಕ ಬ್ರಾಹ್ಮಣರನ್ನು ಕೊಂದಿತ್ತು. ಹೇರಳ ಸಂಪತ್ತನ್ನು ಅಪಹರಿಸಿತ್ತು. ಮಠಾಧಿಪತಿಗಳು ಪ್ರಾಣರಕ್ಷಣೆಗಾಗಿ ಪಲಾಯನ ಮಾಡ ಬೇಕಾಯಿತು. ಅಂದು ಶೃಂಗೇರಿ ಪೀಠಾಧಿಪತಿಗಳ ವಿನಂತಿಯನ್ನು ಮನ್ನಿಸಿ ಸಂರಕ್ಷಣೆಗಾಗಿ ಟಿಪ್ಪುಸುಲ್ತಾನ್‌ರು ಸೇನೆಯನ್ನು ಕಳುಹಿಸಿ ಅಕ್ರಮಿಗಳನ್ನು ಹೊಡೆದೋಡಿಸಿದ್ದರು."

**(Bundle of Letters in the Temple Sringeri Discovered by Shri Narasimachar in 1916 quoted by K.H.Khan, Tippu Sultan, P: 355)**

ರೋಮಿಲಾಥಾಪರ್ ಹೀಗೆ ಬರೆದಿದ್ದಾರೆ: "ಹನ್ನೆರಡನೆಯ ಶತಮಾನದಲ್ಲಿ ಕಾಶ್ಮೀರವನ್ನು ಆಳಿದ ಹರ್ಷನ ಉದಾಹರಣೆ ನಮ್ಮ ಮುಂದಿದೆ. ಆತನ ಮಟ್ಟಿಗೆ ಪೂಜಾಸ್ಥಳದ ಧ್ವಂಸವು ಯೋಜಿತ ಕೃತ್ಯವಾಗಿತ್ತು. ಅದಕ್ಕಾಗಿ ಆಡಳಿತಾತ್ಮಕ ವ್ಯವಸ್ಥೆಯನ್ನು ಮಾಡಲಾಗಿತ್ತು. ಹರ್ಷನು ದೇವೋತ್ಪತನ ನಾಯಕನೆಂಬ (ದೇವಮಂದಿರನ್ನು ನಾಶಪಡಿಸುವ ಅಧಿಕಾರಿ) ಓರ್ವ ಅಧಿಕಾರಿ ಯನ್ನೇ ಅದಕ್ಕಾಗಿ ನೇಮಿಸಿದ್ದನೆಂದು ಕಲ್ಹಣನು ತನ್ನ 'ರಾಜತರಂಗಿಣಿ'ಯಲ್ಲಿ ಸ್ಪಷ್ಟಪಡಿಸಿದ್ದಾನೆ. ಪೂಜಾಲಯಗಳನ್ನು ದೋಚುವುದೇ ಆತನ ಪ್ರಧಾನ ಕೆಲಸವಾಗಿತ್ತು. ಈ ಕೃತ್ಯಕ್ಕಾಗಿ ಹರ್ಷನನ್ನು ಮತಾಂಧನೆಂದು ಹೆಸರಿಸುವಂತಿಲ್ಲ, ಆತನು ಸಂಪತ್ತಿಗಾಗಿ ಪೂಜಾಲಯ ಗಳನ್ನು ದೋಚಿ ಆ ಸಂಪತ್ತನ್ನು ಆತ ಬೇರೆ ಕಾರ್ಯಗಳಿಗಾಗಿ ಬಳಸುತ್ತಿದ್ದ."

**('ಕೋಮುವಾದ ಮತ್ತು ಪ್ರಾಚೀನ ಭಾರತದ ಇತಿಹಾಸ ರಚನೆ' ಪ್ರಭಾತ ಪ್ರಿಂಟಿಂಗ್ ಏಂಡ್ ಪಬ್ಲಿಷಿಂಗ್ ಕಂಪೆನಿ ಲಿಮಿಟೆಡ್. ಪು: 23)**

ಹರ್ಬನ್ಸ್ ಮುಖಿಯು ಹೀಗೆ ಬರೆದಿದ್ದಾರೆ: "ಮುಸ್ಲಿಮರು ರಾಜಕೀಯ ಪ್ರತಿಸ್ಪರ್ಧಿ

ಗಳಾಗಿ ರಂಗ ಪ್ರವೇಶಿಸುವುದಕ್ಕಿಂತ ಎಷ್ಟೋ ಮುಂಚೆಯೇ ಶತ್ರುಗಳ ಪೂಜಾಲಯಗಳೊಂದಿಗೆ ಅನೇಕ ಹಿಂದೂರಾಜರು ಇದೇ ರೀತಿ ವರ್ತಿಸಿದ್ದರೆಂಬ ವಾಸ್ತವಿಕತೆಯನ್ನು ಇಲ್ಲಿ ಸಾಂದರ್ಭಿಕ ವಾಗಿ ಜ್ಞಾಪಿಸುತ್ತಿದ್ದೇನೆ. ಪರ್ಮಾರ ವಂಶದ ಆಡಳಿತಾಧಿಕಾರಿಯಾಗಿದ್ದ ಸುಭತ ವರ್ಮನು (1193-1210) ಗುಜರಾತನ್ನು ಆಕ್ರಮಿಸಿ ದಾಭೋಯಿ ಮತ್ತು ಕಾಂಬೋಯಿಗಳ ಜೈನ ಬಸದಿಗಳನ್ನು ದೋಚಿದ್ದನು. ಕಾಶ್ಮೀರದ ಆಡಳಿತಗಾರನಾಗಿದ್ದ ಹರ್ಷನು ತನ್ನ ಸಾಮ್ರಾಜ್ಯದಲ್ಲಿ ನಾಲ್ಕು ದೇವಾಲಯಗಳನ್ನು ಬಿಟ್ಟು ಇತರೆಲ್ಲ ದೇವಾಲಯಗಳನ್ನು ದೋಚಿ ತನ್ನ ಖಜಾನೆ ತುಂಬಿಸಿದ್ದನು. **(Ibid, ಪುಟ: 48)**

ಭಾರತದ ಬೌದ್ಧ ವಿಹಾರಗಳ ಪತನಗಾಥೆ ಯಾರಿಗೂ ಅಜ್ಞಾತವಾಗಿಲ್ಲ. 'ಕೇರಳವು ಪರಶುರಾಮನಿಂದ' ಎಂಬ ಕೃತಿಯಲ್ಲಿ ಹೀಗಿದೆ: "ಭಾರತದಾದ್ಯಂತವಿರುವ ಅನೇಕ ಸಹಸ್ರ ಬೌದ್ಧ ವಿಹಾರಗಳನ್ನು ನಾಶಪಡಿಸಿ ಅವುಗಳಲ್ಲಿ ಹೆಚ್ಚಿನ ವಿಹಾರಗಳನ್ನು ಇಂದು ಪ್ರಚಲಿತ ವಿರುವ ಬ್ರಾಹ್ಮಣ ನಿಯಂತ್ರಿತ ಆರಾಧನಾ ಕ್ರಮಗಳಿರುವ ಪೂಜಾಲಯಗಳಾಗಿ ಮಾರ್ಪಡಿಸ ಲಾಯಿತು."

ಕೇರಳ ಸರಕಾರವು ಪ್ರಕಟಿಸಿದ 'ಜನಪಥ'ದಲ್ಲಿ ಹೀಗೆ ಬರೆಯಲಾಗಿದೆ: "ಆರ್ಯರು ಬೌದ್ಧ-ಜೈನ ವಿಹಾರಗಳನ್ನು ಹಿಂದೂ ಪೂಜಾಲಯಗಳಾಗಿ ಮಾರ್ಪಡಿಸಿ ಅವುಗಳ ಆಶ್ರಯ ದಲ್ಲಿದ್ದ ವಿದ್ಯಾಲಯಗಳನ್ನು ವೇದಪಾಠ ಶಾಲೆಗಳಾಗಿ ಬದಲಾಯಿಸಿದರು."

**(ಜನಪಥ: ಜೂನ್ 1983)**

ಮುಹಮ್ಮದ್ ಘಜ್ನಿಯ ದೇವಾಲಯ ಲೂಟಿಯು ಭಾರತದಲ್ಲಿ ಇಸ್ಲಾಮ್ ಮತ್ತು ಮುಸ್ಲಿಮರಿಗೂ ಇಸ್ಲಾಮಿ ಸಂದೇಶ ಪ್ರಚಾರಕ್ಕೂ ಮಾಡಿರುವ ಹಾನಿಯು ಅವರ್ಣನೀಯ ವಾಗಿದೆ. ಅವರ ಇಸ್ಲಾಮೇತರ ಮತ್ತು ಅರೋಚಕವಾದ ಈ ಹೀನಕೃತ್ಯವು ಹಿಂದೂ ಸಮುದಾಯದಲ್ಲಿ ಇಸ್ಲಾಮಿನ ಕುರಿತು ಗಂಭೀರ ತಪ್ಪು ತಿಳುವಳಿಕೆಗಳಿಗೆ ಕಾರಣವಾಯಿತು. ಪ್ರೊ। ಹಬೀಬ್ ಮುಹಮ್ಮದ್ ಹೀಗೆ ಬರೆದಿದ್ದಾರೆ: "ಮಹಮ್ಮದ್ ಘಜ್ನಿಯ ಆಕ್ರಮಣದಿಂದ ಈ ದೇಶದಲ್ಲಿ ವಿಗ್ರಹ ಧ್ವಂಸ ನಡೆಯಿತು. ಅನಂತರ ಎಲ್ಲ ಮುಸ್ಲಿಮ್ ರಾಜಂದಿರನ್ನು ಸಾರಾಸಗಟಾಗಿ ದೇವಾಲಯ ಧ್ವಂಸಕರೆಂದು ಚಿತ್ರೀಕರಿಸಲಾಗಿದೆ. ಆ ಮೂಲಕ ಘಜ್ನಿಯು ಭಾರತೀಯರ ಮನದಲ್ಲಿ ಶಾಶ್ವತ ದ್ವೇಷ ಮತ್ತು ಅಪನಂಬಿಕೆಗೆ ಕಾರಣನಾಗಿದ್ದಾನೆ. ಇಸ್ಲಾಮಿನ ಸಂದೇಶ ಪ್ರಚಾರಕ್ಕೆ ಘಜ್ನಿಯ ಆಕ್ರಮಣದ ನೆನಪು ಮತ್ತು ಅದರಿಂದ ಮೂಡಿದ ಭೀತಿಯು ಮಹಾ ಅಡ್ಡಿಯಾಗಿದೆ. ಆದ್ದರಿಂದಲೇ ಘಜ್ನಿ ತೀರಿಕೊಂಡಾಗ ಲಾಹೋರ್‌ನಿಂದ ಉತ್ತರ ಭಾರತದ ಯಾವೆಡೆಗಳಲ್ಲಿಯೂ ಇಸ್ಲಾಮಿನ ಕಣವೂ ಉಳಿದಿರಲಿಲ್ಲ."

**(Prof. Habeeb Muhammad of Ghazamin. ಪುಟ: 47)**

"ಕೆಲವರು, ಪ್ರಖ್ಯಾತರಾದ ಟಿಪ್ಪುಸುಲ್ತಾನ್‌ರನ್ನು ಮತಾಂಧ ಮತ್ತು ದೇವಾಲಯ

ಧ್ವಂಸಕನೆಂದು ಚಿತ್ರಿಸಲು ಪ್ರಯತ್ನಿಸುತ್ತಿದ್ದಾರೆ. ಅದಕ್ಕಾಗಿ ಅವರು ಬ್ರಿಟಿಷರು ರಚಿಸಿದ ಕೃತಕ ದಾಖಲೆಗಳನ್ನು ಅವಲಂಬಿಸುತ್ತಾರೆ. ವಸ್ತುತಃ ಟಿಪ್ಪು ಸುಲ್ತಾನರು ಸಹೋದರ ಸಮುದಾಯಗಳ ಧಾರ್ಮಿಕ ವಿಶ್ವಾಸಗಳನ್ನೂ ಆಚಾರಗಳನ್ನೂ ಆರಾಧನಾ ಕರ್ಮಗಳನ್ನೂ ಸಂಪೂರ್ಣವಾಗಿ ಗೌರವಿಸುವ ಆಡಳಿತಗಾರರಾಗಿದ್ದರು. ಅವರು ಅನೇಕ ದೇವಾಲಯಗಳ ನಿರ್ಮಾಣಕ್ಕೆ ನೆರವು ನೀಡಿದ್ದಾರೆ. ಅನೇಕ ದೇವಾಲಯಗಳಿಗೆ ಸೊತ್ತುಗಳನ್ನು ಕೊಡುಗೆ ನೀಡಿದ್ದಾರೆ. ಮೈಸೂರಿನ ಪ್ರಾಚ್ಯವಸ್ತು ಇಲಾಖೆಯ ವರದಿಯನ್ವಯ ಅವರು ನಂಜನಗೂಡು ತಾಲೂಕಿನ ಲಕ್ಷ್ಮೀಕಾಂತ ದೇವಾಲಯ ಮತ್ತು ಮೇಲು ಕೋಟೆ ನಾರಾಯಣ ಸ್ವಾಮಿ ದೇವಾಲಯ ಗಳಿಗೆ ಆನೆಗಳನ್ನೂ ಚಿನ್ನ-ಬೆಳ್ಳಿಯ ಹರಿವಾಣಗಳನ್ನೂ ಜಮೀನು ಮತ್ತಿತರ ಸೊತ್ತುಗಳನ್ನೂ ನೀಡಿದ್ದರು." **(ಮೈಸೂರ್ ಆರ್ಕಿಯಲಾಜಿಕಲ್ ರಿಪೋರ್ಟ್, 1917 ಪುಟ: 60)**

ಈ ದೇವಾಲಯಗಳ ಅನೇಕ ಚಿನ್ನದ ಹರಿವಾಣ ಮತ್ತು ದೀಪಗಳಲ್ಲಿ 'ಪಾದುಶಾ ಟಿಪ್ಪುಸುಲ್ತಾನ್‌ರ ಕೊಡುಗೆ' ಎಂದು ಬರೆದಿರುವುದನ್ನು ಇಂದಿಗೂ ನೋಡಬಹುದು.

**(Ibid ಪುಟ: 23-40)**

ಪುಷ್ಪಗಿರಿ ದೇವಾಲಯದ ಪರಿಪಾಲನೆಗಾಗಿ ತುಂಗಹಳ್ಳಿ ಮತ್ತು ಗೊಲ್ಲಹಳ್ಳಿ ಎಂಬ ಗ್ರಾಮಗಳನ್ನು ಟಿಪ್ಪುಸುಲ್ತಾನ್ ಉಂಬಳಿಯಾಗಿ ನೀಡಿದ್ದರು.**(Ibid ಪುಟ: 249-295)**

ಶಾರದಾ ಪೀಠದ ಜಗದ್ಗುರುಗಳು, ಅಲೀ ಸಹೋದರರ ದಾವೆಯ ವಿಚಾರಣೆಯ ವೇಳೆ ನ್ಯಾಯಾಲಯದಲ್ಲಿ ನೀಡಿದ ಸಾಕ್ಷ್ಯದಲ್ಲಿ ಹೀಗಿದೆ: "ಶೃಂಗೇರಿ ಮಠಾಧೀಶರಾದ ಶಂಕರಾಚಾರ್ಯರನ್ನು ಬಹಳವಾಗಿ ಗೌರವಿಸುತ್ತಿದ್ದ ಟಿಪ್ಪುಸುಲ್ತಾನ್‌ರು ನೂರಾರು ದೇವಾಲಯ ಗಳ ಜೀರ್ಣೋದ್ಧಾರ ಇತ್ಯಾದಿಗಳಿಗಾಗಿ ನೆರವು ನೀಡಿದ್ದಾರೆ. ಮಾತ್ರವಲ್ಲ, ಅವರ ಶ್ರಮ ಫಲದಿಂದ ಹಲವು ಹೊಸ ದೇವಾಲಯಗಳೂ ನಿರ್ಮಿಸಲ್ಪಟ್ಟಿವೆ."

**ಉದ್ಧರಣೆ: Noorani, The Trail of Ali Brothers, Indian Express dt 25.3.1973**

"ರಂಗನಾಥ ದೇವಾಲಯವು ಟಿಪ್ಪುಸುಲ್ತಾನ್‌ರ ಶ್ರೀರಂಗಪಟ್ಟಣದ ಕೋಟೆಯೊಳಗಿದೆ. ಅದು ಅವರ ಅರಮನೆಯಿಂದ ಕೇವಲ 100 ಗಜ ದೂರದಲ್ಲಿದೆ. ನರಸಿಂಹರಾವ್ ಕ್ಷೇತ್ರ ಮತ್ತು ಗಂಗಾಧರೇಶ್ವರ ಕ್ಷೇತ್ರವೂ ಅವರ ಕೋಟೆಯ ಒಳಗಿದೆ. ಅವುಗಳ ಆಡಳಿತ ಮತ್ತು ಉತ್ಸವಗಳಿಗಾಗಿ ಟಿಪ್ಪುಸುಲ್ತಾನ್ ಉದಾರ ಆರ್ಥಿಕ ನೆರವು ನೀಡುತ್ತಿದ್ದರು. ಟಿಪ್ಪುಸುಲ್ತಾನ್‌ರು 156 ಹಿಂದೂ ಕ್ಷೇತ್ರಗಳಿಗೆ ಆರ್ಥಿಕ ನೆರವು ನೀಡಿದ್ದರೆಂದು ಸಿ.ಕೆ.ಕರೀಮ್ ಆಧಾರ ಸಹಿತ ಸಾಬೀತುಪಡಿಸಿದ್ದಾರೆ." **(ಇತಿಹಾಸ ಅಧ್ಯಯನಗಳು ಪುಟ: 433-438)**

ಅವರ ಕುರಿತು ಗಾಂಧೀಜಿ ಹೀಗೆ ಬರೆದಿದ್ದಾರೆ: "ವಿದೇಶಿ ಇತಿಹಾಸಗಾರರು ಟಿಪ್ಪುಸುಲ್ತಾನ್‌ರನ್ನು ಮತಾಂಧ, ಇಸ್ಲಾಮ್ ಸ್ವೀಕರಿಸುವಂತೆ ಹಿಂದೂ ಪ್ರಜೆಗಳನ್ನು ಬಲಾತ್ಕರಿಸಿ ದವನೆಂದು ಚಿತ್ರೀಕರಿಸಿದ್ದಾರೆ. ಆದರೆ, ಅವರು ಅಂತಹವರಾಗಿರಲಿಲ್ಲ. ಬದಲಾಗಿ ಹಿಂದೂ

ಪ್ರಜೆಗಳೊಂದಿಗೆ ಅವರ ಸಂಬಂಧವು ಸಂಪೂರ್ಣ ಸೌಹಾರ್ದಮಯವಾಗಿತ್ತು. ಮೈಸೂರು ಸಂಸ್ಥಾನದ ಪ್ರಾಚ್ಯವಸ್ತು ವಿಭಾಗದಲ್ಲಿ ಟಿಪ್ಪುಸುಲ್ತಾನ್‌ರು ಶೃಂಗೇರಿ ಮಠದ ಶಂಕರಾಚಾರ್ಯರಿಗೆ ಬರೆದ ಸುಮಾರು 30 ಪತ್ರಗಳಿವೆ... ಹಿಂದೂ ದೇವಾಲಯಗಳಿಗೆ ಟಿಪ್ಪುಸುಲ್ತಾನ್ ಧಾರಾಳ ಜಮೀನುಗಳನ್ನು ದಾನಮಾಡಿದ್ದಾರೆ. ಟಿಪ್ಪುವಿನ ಅರಮನೆಯ ಮುಂಭಾಗದಲ್ಲಿರುವ ವೆಂಕಟರಮಣ, ಶ್ರೀನಿವಾಸ, ಶ್ರೀರಂಗನಾಥ ಇತ್ಯಾದಿ ಕ್ಷೇತ್ರಗಳು ಆ ಮಹಾನುಭಾವನ ಸಹಿಷ್ಣುತೆ ಮತ್ತು ವಿಶಾಲ ಮನೋಭಾವದ ಅಮರ ಸ್ಮಾರಕಗಳಾಗಿವೆ. ಅಲ್ಲಾಹನ ಭಕ್ತನಾಗಿದ್ದ ಆ ಮಹಾನ್ ಹುತಾತ್ಮ- ಅವರು ಸ್ವಾತಂತ್ರ್ಯದ ಹುತಾತ್ಮರಾಗಿದ್ದರು- ಅವರು ಹಿಂದೂ ದೇವಾಲಯಗಳ ಘಂಟಾನಾದವನ್ನು ತನ್ನ ಪ್ರಾರ್ಥನೆಗಳಿಗೆ ಅಡ್ಡಿಯೆಂದು ಭಾವಿಸಿರಲಿಲ್ಲ." **(ಯಂಗ್ ಇಂಡಿಯಾ. 1930 ಜನವರಿ 23, ಪುಟ: 31)**

ಸಂಕ್ಷಿಪ್ತದಲ್ಲಿ, ಯಾವ ಮುಸ್ಲಿಮ್ ಆಡಳಿತಗಾರನೂ ಪ್ರಜ್ಞಾಪೂರ್ವಕವಾಗಿ ದೇವಾಲಯಗಳನ್ನು ನಾಶಪಡಿಸಿರಲಿಲ್ಲ. ಯುದ್ಧ ಮತ್ತು ಸಂಘರ್ಷಗಳಿಂದ, ಕೆಲವು ದೇವಾಲಯಗಳು ಹಾನಿಗೊಂಡಿವೆ ಅಥವಾ ನಾಶವಾಗಿವೆಯೆಂಬುದು ನಿಜ. ಆದರೆ, ಧಾರ್ಮಿಕ ಕಾರಣಗಳಿಗಾಗಿ ಅನ್ಯರ ಆರಾಧನಾಲಯಗಳನ್ನು ಕೆಡಹಿದ ಸಾಕ್ಷ್ಯಾಧಾರಗಳನ್ನು ಇತಿಹಾಸದಲ್ಲಿ ಕಂಡು ಹಿಡಿಯಲು ಸಾಧ್ಯವಿಲ್ಲ. ಎಂಟು ಶತಮಾನಗಳ ನಿರಂತರ ಮುಸ್ಲಿಮ್ ಆಳ್ವಿಕೆಯ ಬಳಿಕವೂ ಭಾರತದ ಸಹಸ್ರಾರು ದೇವಾಲಯಗಳು ಸುರಕ್ಷಿತವಾಗಿ ಉಳಿದುವೆಂಬ ವಾಸ್ತವಿಕತೆಯನ್ನು ಮರೆಯಬಾರದು.

ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯನ್ನು ಅನುಸರಿಸಲು ಪ್ರತಿಜ್ಞಾಬದ್ಧನಾಗಿರುವ ಓರ್ವ ಸತ್ಯವಿಶ್ವಾಸಿಯು ಪರಧರ್ಮೀಯರ ಆರಾಧನಾಲಯಗಳಿಗೆ ಹಾನಿಯುಂಟು ಮಾಡಲಾರನು. ಎಲ್ಲ ಧರ್ಮಾನುಯಾಯಿಗಳ ಆರಾಧನಾಲಯಗಳು ಸುರಕ್ಷಿತವಾಗಿರಬೇಕೆಂದು ಇಸ್ಲಾಮ್ ಬಯಸುತ್ತದೆ. ಇತಿಹಾಸದ ಕರಾಳ ಹಂತಗಳಲ್ಲಿ ಯಾರಿಂದಲಾದರೂ ಅಕ್ರಮಗಳು ನಡೆದಿದ್ದರೆ, ಅದಕ್ಕೆ ದೇವವಿಶ್ವಾಸ ಮತ್ತು ಪರಲೋಕ ಪ್ರಜ್ಞೆಯಿಲ್ಲದ ಮುಸ್ಲಿಮ್ ನಾಮಧಾರಿಗಳೇ ಕಾರಣರಾಗಿದ್ದಾರೆ. ಸ್ವಾರ್ಥಿಗಳಾದ ದುಷ್ಟ ಆಡಳಿತಗಾರರಿಗೆ ಧರ್ಮ ಮತ್ತು ವಿಶ್ವಾಸಗಳೆಲ್ಲವೂ ಅಧಿಕಾರ ಗಳಿಸಿ ಅದನ್ನು ಸುದೃಢಗೊಳಿಸುವ ಮರೆಯಾಗಿದೆಯಷ್ಟೆ.

# ವೈಯಕ್ತಿಕ ಕಾನೂನುಗಳ ಸಂರಕ್ಷಣೆ

ಜಗತ್ತಿನ ಎಲ್ಲ ಪ್ರಸಿದ್ಧ ಧರ್ಮಗಳಲ್ಲಿಯೂ ವೈಯಕ್ತಿಕ ಕಾನೂನುಗಳು (Personal Laws) ಧರ್ಮದ ಅವಿಭಾಜ್ಯ ಅಂಗವಾಗಿವೆ. ವಿವಾಹ, ವಿವಾಹ ವಿಚ್ಛೇದನ, ವಾರೀಸು ಹಕ್ಕು, ಶವಸಂಸ್ಕಾರದಂತಹ ಎಲ್ಲ ಕಾರ್ಯಗಳನ್ನೂ ತಂತಮ್ಮ ಧರ್ಮಾಚಾರಗಳಂತೆ ನಡೆಸಬೇಕೆಂದು ಹೆಚ್ಚಿನೆಲ್ಲ ಸಮುದಾಯದವರೂ ಬಯಸುತ್ತಾರೆ. ಹಾಗಿದ್ದರೂ ಆಧುನಿಕ ಜಗತ್ತಿನ ಕೆಲವು ಜಾತ್ಯತೀತ ಲೌಕಿಕ ರಾಷ್ಟ್ರಗಳು ಅದಕ್ಕೆ ಅನುಮತಿ ನೀಡುವುದಿಲ್ಲ. ಅವರು ರಾಷ್ಟ್ರದ ಅಖಂಡತೆ ಮತ್ತು ಸಾಂಸ್ಕೃತಿಕ ಐಕ್ಯದ ಹೆಸರಲ್ಲಿ ರಾಷ್ಟ್ರದ ಎಲ್ಲ ಜನರಿಗೂ ಅನ್ವಯವಾಗುವ ಸಮಾನ ಕಾನೂನುಗಳನ್ನು ರಚಿಸಿ ಜಾರಿಗೊಳಿಸಲು ತವಕ ಪಡುತ್ತಾರೆ. ಆದರೆ ಸಂಪೂರ್ಣ ಧರ್ಮಾಧಿಷ್ಠಿತವಾಗಿರುವ ಇಸ್ಲಾಮೀ ರಾಷ್ಟ್ರವು ರಾಷ್ಟ್ರದ ಧಾರ್ಮಿಕ ಅಲ್ಪಸಂಖ್ಯಾತರಿಗೆ ಅವರ ವೈಯಕ್ತಿಕ ಕಾನೂನುಗಳನ್ನು ಅನುಸರಿಸುವ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡುತ್ತದೆ. ಇಸ್ಲಾಮ್ ಅಂಗೀಕರಿಸಿದ ಧಾರ್ಮಿಕ ಸ್ವಾತಂತ್ರ್ಯದಲ್ಲಿ ಮುಸ್ಲಿಮೇತರ ಪ್ರಜೆಗಳ ಪ್ರಸ್ತುತ ಹಕ್ಕುಗಳೂ ಸೇರುತ್ತವೆ. ಅಲ್ಪಸಂಖ್ಯಾತರ ವೈಯಕ್ತಿಕ ಕಾನೂನು ಮತ್ತು ಪೌರಹಕ್ಕುಗಳನ್ನು ನಿಷೇಧಿಸುವುದನ್ನು ಪ್ರವಾದಿವರ್ಯರು(ಸ) ಬಲವಾಗಿ ವಿರೋಧಿಸಿದ್ದಾರೆ. ಅವರು ಹೀಗೆ ಹೇಳಿರುವರು: "ಎಚ್ಚರ ವಹಿಸಿರಿ, ಮುಸ್ಲಿಮೇತರ ಪ್ರಜೆಗಳನ್ನು ಯಾರಾದರೂ ಹಿಂಸಿಸಿದರೆ, ಅವರ ಮೇಲೆ ದುಬಾರಿ ತೆರಿಗೆ ಹೇರಿದರೆ, ಅವರೊಂದಿಗೆ ಕ್ರೂರವಾಗಿ ವರ್ತಿಸಿದರೆ, ಅವರ ಹಕ್ಕುಗಳನ್ನು ಮೊಟಕುಗೊಳಿಸಿದರೆ ವಿಧಿನಿರ್ಣಾಯಕ ದಿನದಲ್ಲಿ ನಾನು ಅಂಥವರ ವಿರುದ್ಧ ಸ್ವಯಂ ದೂರು ಸಲ್ಲಿಸುತ್ತೇನೆ." (ಅಬೂ ದಾವೂದ್)

ಇಸ್ಲಾಮೀ ರಾಷ್ಟ್ರದಲ್ಲಿ ಮುಸ್ಲಿಮರಂತೆಯೇ ಧಾರ್ಮಿಕ ಅಲ್ಪಸಂಖ್ಯಾತರ ಪ್ರಾಣ, ಸೊತ್ತು ಮತ್ತು ಮಾನವೆಲ್ಲವೂ ಪಾವನ ಮತ್ತು ಸುರಕ್ಷಿತವಾಗಿರುವುವು. ಪ್ರವಾದಿ(ಸ) ಹೀಗೆಂದಿದ್ದಾರೆ: "ಮುಸ್ಲಿಮೇತರ ಪ್ರಜೆಗಳನ್ನು ಹಿಂಸಿಸುವಾತನಿಗೆ ಸ್ವರ್ಗದ ಸುವಾಸನೆಯೂ ಲಭಿಸಲಾರದು." **(ಅಬೂ ಯೂಸುಫ್: ಕಿತಾಬುಲ್ ಖರಾಜ್, ಪುಟ: 71)**

ಅವರ ಸ್ಮಶಾನಗಳನ್ನೂ ಅಗೌರವಿಸಬಾರದೆಂದು ಹನಫೀ ಕಾನೂನು ಗ್ರಂಥವಾಗಿರುವ

'ಅಲ್ ಬಹರುರ್ರ್ರಾಹಿಕ್'ನಲ್ಲಿ ಸ್ಪಷ್ಟಪಡಿಸಲಾಗಿದೆ.

**(ಉದ್ಧರಣೆ: Hameedulla: Muslim Conduct of State. P.P. 114-11**

ಇಸ್ಲಾಮಿ ರಾಷ್ಟ್ರವು ಮುಸ್ಲಿಮೇತರ ಪ್ರಜೆಗಳ ವೈಯಕ್ತಿಕ ಕಾನೂನುಗಳಲ್ಲಿ ಹಸ್ತಕ್ಷೇ ಅಥವಾ ತಿದ್ದುಪಡಿ ಮಾಡುವುದಿಲ್ಲ. ಅಂಥ ವಿಷಯಗಳಲ್ಲಿ ಶರೀಅತ್ ನಿಯಮಗಳನ ಅವರ ಮೇಲೆ ಹೇರುವುದಿಲ್ಲ. ವಿವಾಹ, ವಿವಾಹ ವಿಚ್ಛೇದನ, ವಾರೀಸು ಹಕ್ಕು ಮುಂತಾ ವಿಷಯಗಳಲ್ಲಿ ಅವರ ವಿವಾದಗಳನ್ನು ಅವರ ಧರ್ಮಾಚಾರಗಳನ್ವಯವೇ ಇಸ್ಲಾಮಿ ನ್ಯಾಯಾಲಯ ಬಗೆಹರಿಸುತ್ತದೆ. ಪ್ರವಾದಿವರ್ಯರ(ಸ) ಕಾಲದಲ್ಲಿ ಯಹೂದಿಗಳ ವಿವಾದ ವಿಚಾರಣೆಗೆ ಬಂದರೆ ಮದೀನಾದ 'ಬೈತುಲ್ ಮಿದ್‌ರಾಸ್' ಎಂಬ ಯಹೂದಿ ವಿದ್ವಾಂ ಪರಿಷತ್ತನ್ನು ಸಂಪರ್ಕಿಸಿ ಅಲ್ಲಿನ ಪುರೋಹಿತರೊಡನೆ ತೌರಾತ್‌ನ ವಿಧಿಗಳನ್ನು ಕೇಳಿ ತಿಳಿ ಬಳಿಕ ಅವರು ತೀರ್ಪು ನೀಡುತ್ತಿದ್ದರು.

**(ಇಬ್ನು ಹಿಶಾಮ್, ಸೀರತುನ್ನಬಿ, ಸಂಪುಟ: 2, ಪುಟ: 201**

ಡಾ| ಮುಸ್ತಫಾಸಬಾಯಿ ಹೀಗೆ ಬರೆದಿದ್ದಾರೆ: "ಇಸ್ಲಾಮಿ ರಾಷ್ಟ್ರದಲ್ಲಿ ಧಾರ್ಮಿ ಮುಖಂಡರಿಗೆ ಅವರ ವಲಯಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯ ಮತ್ತು ಅವರ ಅನುಯಾಯಿ ಗಳ ಬಗ್ಗೆ ತೀರ್ಮಾನ ಕೈಗೊಳ್ಳುವ ಅಧಿಕಾರವನ್ನು ನೀಡಲಾಗಿತ್ತು. ಸರಕಾರವು ಅಂಥ ವಿಷಯಗಳಲ್ಲಿ ಕೈ ಹಾಕುತ್ತಿರಲಿಲ್ಲ. ರೋಮನ್ ಆಡಳಿತದ ಕಾಲದಲ್ಲಿ ತಿಳಿದಿರದ ಅಥವಾ ಅನುಭವಿಸಿಲ್ಲದ ಸ್ವಾತಂತ್ರ್ಯವು ಅಲ್ಲಿನ ಕ್ರೈಸ್ತರಿಗೆ ಮುಸ್ಲಿಮರಿಂದ ದೊರೆತಿತ್ತು. ಮಹಾನ್ ಮುಹಮ್ಮದುಲ್ ಫಾತಿಹ್ ಕಾನ್ಸ್‌ಟೆಂಟಿನೋಪಲನ್ನು ಸ್ವಾಧೀನಪಡಿಸಿದಾಗ ಅದು ಪೂರ್ವ ಪ್ರದೇಶಗಳ ಕೆಥೋಲಿಕ್ ಪೇಟ್ರಿಯಾರ್ಕ್‌ರ (Patriarch of Eastern Catholic Christians) ರಾಜಧಾನಿಯಾಗಿತ್ತು. ಆದ್ದರಿಂದ, ಅವರು ಅಲ್ಲಿನ ಎಲ್ಲ ಪ್ರಜೆಗಳಿಗೂ ಅಭಯ ನೀಡಿದ್ದರು. ಅವರೆಲ್ಲರೂ ಕ್ರೈಸ್ತ ಧರ್ಮಾವಲಂಬಿಗಳಾಗಿದ್ದರು. ಅವರು ಸಂಪತ್ತು, ಪ್ರಾಣ, ವಿಶ್ವಾಸ, ಶಿಲುಬೆ ಇತ್ಯಾದಿಗಳಿಗೆ ಭದ್ರತೆ ಒದಗಿಸಿ ಸೈನಿಕ ಸೇವೆಯಿಂದ ಅವರಿಗೆ ವಿನಾಯಿತಿ ನೀಡಿದರು. ತಮ್ಮ ಅನುಯಾಯಿಗಳ ನಡುವಣ ವಿವಾದಗಳಲ್ಲಿ ತೀರ್ಪು ನೀಡುವ ಮತ್ತು ಅವರಿಗೆ ಅಗತ್ಯವಿರುವ ಕಾನೂನುಗಳನ್ನು ರಚಿಸುವ ಅಧಿಕಾರವನ್ನು ಧಾರ್ಮಿಕ ಮುಖಂಡರಿಗೆ ನೀಡಿದರು. ಸರಕಾರವು ಅವುಗಳಲ್ಲಿ ಹಸ್ತಕ್ಷೇಪಿಸುತ್ತಿರಲಿಲ್ಲ. ಆದ್ದರಿಂದ, ಕಾನ್ಸ್‌ಟೆಂಟಿನೋಪಲ್‌ನ ನಿವಾಸಿಗಳು ಹಳೆಯ ಬೈಝಾಂಟಿಯಾನ್ ಮತ್ತು ಮುಹಮ್ಮದುಲ್ ಫಾತಿಹ್‌ರ ಆಡಳಿತ ಕಾಲಗಳ ವ್ಯತ್ಯಾಸವನ್ನು ಸ್ಪಷ್ಟವಾಗಿ ಮನಗಂಡರು. ಬೈಝಾಂಟಿಯರು, ವಿವಿಧ ಸಮುದಾಯಗಳ ನಡುವಣ ಸಮಸ್ಯೆ ಮತ್ತು ವಿವಾದಗಳಲ್ಲಿ ಹಸ್ತಕ್ಷೇಪ ನಡೆಸಿ ಪಕ್ಷಪಾತದಿಂದ ವರ್ತಿಸುತ್ತಿದ್ದರು. ಅವರು ಯಾವಾಗಲೂ ತಮ್ಮ ಕಕ್ಷಿ ಮತ್ತು ಚರ್ಚಿನ ಜನರ ಪರವಾಗಿ ತೀರ್ಪು ನೀಡುತ್ತಿದ್ದರು. ಆದ್ದರಿಂದ, ಅಲ್ಲಿನ ಕ್ರೈಸ್ತ

ಶ್ವಾಸಿಗಳು ಹೊಸ ಇಸ್ಲಾಮೀ ಸರಕಾರದಿಂದ ಸಂತೃಪ್ತರಾಗಿ ಅದರಲ್ಲಿ ಸಂಪೂರ್ಣ ಭರವಸೆ ಇರಿಸಿದ್ದರು. ಉದಾತ್ತ ಧಾರ್ಮಿಕ ಸಹಿಷ್ಣುತೆಯಿಂದ ಅವರಿಗೆ ಅಪಾರ ನೆಮ್ಮದಿ ಉಂಟಾಯಿತು. ವಸ್ತುತಃ ಮುಹಮ್ಮದುಲ್ ಫಾತಿಹ್ ರೋಮನ್ ಪೆಟ್ರಿಯಾರ್ಕಿಸ್‌ರಿಗೆ ರಾಷ್ಟ್ರದೊಳಗೊಂದು ರಾಷ್ಟ್ರದ ಪದವಿ ಮತ್ತು ಸರಕಾರದೊಳಗೊಂದು ಸರಕಾರದ ಸ್ಥಾನವನ್ನು ನೀಡಿದ್ದರು. ಪೇಟ್ರಿಯಾರ್ಕಿಸ್ ಮತ್ತು ಅನುಯಾಯಿಗಳು ಇಸ್ಲಾಮೀ ರಾಷ್ಟ್ರದ ಈ ಸೌಲಭ್ಯ ವನ್ನು 500 ವರ್ಷಗಳ ಸುದೀರ್ಘ ಕಾಲ ಅನುಭವಿಸಿದರು. ಅವರಿಗೆ ಸರ್ವಸ್ವಾತಂತ್ರ್ಯವಿತ್ತು. ಇದರ ಭದ್ರತೆಗಾಗಿ ಅವರು ಆರ್ಥಿಕ ಅಥವಾ ಸೈನಿಕ ಹೊಣೆಗಾರಿಕೆಗಳನ್ನು ವಹಿಸ ಬೇಕಾಗಲಿಲ್ಲ. ಎಲ್ಲವನ್ನೂ ಸರಕಾರವೇ ನಿರ್ವಹಿಸುತ್ತಿತ್ತು.

**(ಇಸ್ಲಾಮೀ ನಾಗರಿಕತೆ: ಕೆಲವು ಶೋಭಾಯಮಾನ ಚಿತ್ರಗಳು ಪುಟ: 106, 107)**

ಈ ಕುರಿತು ವಾನ್ ಕ್ರೆಮರ್ ಹೀಗೆ ಬರೆದಿದ್ದಾರೆ: "ಮುಸ್ಲಿಮೇತರ ಸಮಾಜಗಳು ಬಹುವಂಶ ಸ್ವಾಯತ್ತತೆಯ ಹಕ್ಕನ್ನು ಹೊಂದಿದ್ದವು. ಅವರ ಆಂತರಿಕ ವಿಷಯಗಳನ್ನು ವ್ಯವಹರಿಸುವ ಸ್ವಾತಂತ್ರ್ಯವನ್ನು ಸರಕಾರವು ಅವರಿಗೆ ಬಿಟ್ಟುಕೊಟ್ಟಿತ್ತು. ಸಹಧರ್ಮೀಯರಿಗೆ ಸಂಬಂಧಿಸಿದ ಮೊಕದ್ದಮೆಗಳಲ್ಲಿ ಅವರ ನಾಯಕರಿಗೆ ನ್ಯಾಯ ತೀರ್ಮಾನದ ಅಧಿಕಾರ ವನ್ನೂ ನೀಡಲಾಗಿತ್ತು."

**(ಉದ್ಧರಣೆ: ಡಾ। ಸಈದ್ ರಮಝಾನ್, ಇಸ್ಲಾಮೀ ಕಾನೂನು: ಸಾಧ್ಯತೆ ಮತ್ತು ನ್ಯಾಯನಿಷ್ಠೆ- ಪುಟ: 146)**

ಸರ್ ಥಾಮಸ್ ಅರ್ನಾಳ್ಡ್ ಹೀಗೆ ಬರೆದಿದ್ದಾರೆ: "ಮುಸ್ಲಿಮೇತರ ಸಮುದಾಯಗಳು ಬಹುವಂಶ ಸಂಪೂರ್ಣವಾಗಿ ಸ್ವಾಯತ್ತತೆಯನ್ನು ಅನುಭವಿಸುತ್ತಿದ್ದುವು. ಅವರ ಆಂತರಿಕ ವ್ಯವಹಾರಗಳನ್ನು ನೋಡಿಕೊಳ್ಳುವ ಅಧಿಕಾರವನ್ನು ಸರಕಾರವು ಅವರಿಗೆ ನೀಡಿತ್ತು. ಧಾರ್ಮಿಕ ವಿಷಯಗಳ ಬಗ್ಗೆ ತೀರ್ಮಾನ ಕೈಗೊಳ್ಳುವ ಅಧಿಕಾರ ಅವರ ಪುರೋಹಿತರಿಗೆ ದೊರೆಯಿತು. ಅವರ ಚರ್ಚ್ ಮತ್ತು ಮಠಗಳಿಗೆ ಯಾವುದೇ ಕುಂದುಂಟಾಗದಂತೆ ನೋಡಿಕೊಳ್ಳಲಾಯಿತು."

**(ಇಸ್ಲಾಮೀ ಬೋಧನೆ ಮತ್ತು ಪ್ರಚಾರ ಪುಟ: 78)**

ಮುಸ್ಲಿಮೇತರ ಪ್ರಜೆಗಳಿಗೆ ತಮ್ಮ ಧರ್ಮಾಚಾರದನ್ವಯ ಆಹಾರ ಪಾನೀಯಗಳನ್ನು ಬಳಸುವ ಒಪ್ಪಿಗೆಯನ್ನು ಇಸ್ಲಾಮ್ ನೀಡುತ್ತದೆ. ಗ್ರಂಥದವರ ಆಹಾರವನ್ನು ಮುಸ್ಲಿಮರಿಗೆ ಧರ್ಮ ಸಮ್ಮತಗೊಳಿಸಲಾಗಿದೆ. ಅಲ್ಲಾಹನು ತಿಳಿಸಿರುತ್ತಾನೆ: **"ಗ್ರಂಥದವರ ಆಹಾರ ನಿಮಗೂ ನಿಮ್ಮ ಆಹಾರ ಅವರಿಗೂ 'ಧರ್ಮಸಮ್ಮತ' ಆಗಿರುತ್ತದೆ."** (ಪವಿತ್ರ ಕುರ್‌ಆನ್, 5:5)

ಆಡಳಿತಗಾರರು, ಮುಸ್ಲಿಮರಿಗೆ ನಿಷಿದ್ಧವಾದ ಆಹಾರ ಪಾನೀಯಗಳನ್ನು ಮುಸ್ಲಿಮೇ ತರರಿಗೆ ಅನ್ವಯಗೊಳಿಸಿರಲಿಲ್ಲ. ಅವರ ಧಾರ್ಮಿಕ ಕಾನೂನು ಮತ್ತು ಆಚಾರಗಳನ್ನು ಪಾಲಿಸುವ ಅನುಮತಿ ಅವರಿಗೆ ನೀಡಲಾಗಿತ್ತು. ಮಾತ್ರವಲ್ಲ, ಕೆಲವೊಮ್ಮೆ ಸಹೋದರ

ಸಮುದಾಯದವರ ಭಾವನೆಗಳನ್ನು ನೋಯಿಸದಿರಲಿಕ್ಕಾಗಿ ಅವರು ತೊರೆಯುವ ಆಹಾ ಪದಾರ್ಥಗಳನ್ನು ಮುಸ್ಲಿಮ್ ಆಡಳಿತಗಾರರೂ ತೊರೆಯುತ್ತಿದ್ದರು. ಮೊಗಲ್ ಸಾಮ್ರಾಜ್ಯ ಸ್ಥಾಪಕನಾದ ಮುಹಮ್ಮದ್ ಝುಹೀರುದ್ದೀನ್ ಬಾಬರನು ಹಿಂದುಗಳ ಭಾವನೆಗಳ ಗೌರವಿಸಿ ಸ್ವತಃ ಗೋಮಾಂಸವನ್ನು ತೊರೆಯಲು ಸನ್ನದ್ಧರಾಗಿದ್ದರು ಮತ್ತು ತಮ್ಮ ಪುತ್ರನಿ ಆ ಕುರಿತು ಉಪದೇಶ ನೀಡಿದ್ದರು. ಅವರು ಪುತ್ರ ಹುಮಾಯೂನ್‌ನಿಗೆ ನೀಡಿದ ಅಂತ್ಯೋ ಪದೇಶದಲ್ಲಿ ಹೀಗಿದೆ: "ನ್ಯಾಯನಿಷ್ಠೆಯಿಂದ ದೇಶವನ್ನು ಆಳಬೇಕು. ನಿನ್ನ ಪ್ರಜೆ ಮನಸೆಳೆಯಲಿಕ್ಕಾಗಿ ಗೋಮಾಂಸ ಭಕ್ಷಣೆಯನ್ನು ಉಪೇಕ್ಷಿಸು. ಹಾಗಾದರೆ ಅವರು ನಿ ಸರಕಾರಕ್ಕೆ ಕೃತಜ್ಞರಾಗಬಹುದು."

**(ಉದ್ಧರಣೆ: ಮಿಸೆಸ್, ನಿಲೋಫರ್ ಅಹ್ಮದ**

**ಇನ್‌ಸ್ಟಿಟ್ಯೂಟ್ ಓಫ್ ಒಬ್ಜೆಕ್ಟಿವ್ ಸ್ಟಡೀಸ್ ನ್ಯೂಡೆಲ್**

ಮುಸ್ಲಿಮ್ ಸರಕಾರಗಳು, ಧಾರ್ಮಿಕ ಅಲ್ಪಸಂಖ್ಯಾತರ ವಿವಾಹ, ಕುಟುಂಬ ಜೀವನ ವಾರೀಸುಹಕ್ಕು ಮುಂತಾದ ವಿಷಯಗಳಲ್ಲಿ ಯಾವತ್ತೂ ಹಸ್ತಕ್ಷೇಪ ನಡೆಸಿರಲಿಲ್ಲ. ಸುದೀರ್ಘ 700 ವರ್ಷಗಳ ಮುಸ್ಲಿಮ್ ಆಡಳಿತದ ಬಳಿಕವೂ ಭಾರತದಲ್ಲಿ ಹಿಂದೂ ಆಚಾರ ಸಾಂಸ್ಕೃತಿಕ ವೈಶಿಷ್ಟ್ಯಗಳು ಯಥಾವತ್ತಾಗಿ ಸುರಕ್ಷಿತವಾಗಿ ಉಳಿದುಕೊಂಡಿದೆ. ಇಸ್ಲಾಮಿ ಆಡಳಿತ ಕಾಲದಲ್ಲಿ ಪರಧರ್ಮೀಯರ ವೈಯಕ್ತಿಕ ಕಾನೂನುಗಳಲ್ಲಿ ಹಸ್ತಕ್ಷೇಪ ಅಥವ ತಿದ್ದುಪಡಿ ಮಾಡಿದ ಒಂದಾದರೂ ಘಟನೆಯನ್ನು ಎತ್ತಿತೋರಿಸಲು ಯಾರಿಂದಲು ಸಾಧ್ಯವಿಲ್ಲ. ಪಾಕಿಸ್ತಾನ ಮತ್ತು ಬಾಂಗ್ಲಾದೇಶವೂ ಸೇರಿದ ಮುಸ್ಲಿಮ್ ರಾಷ್ಟ್ರಗಳ, ಮುಸ್ಲಿಮೇ ತರರ ವೈಯಕ್ತಿಕ ಕಾನೂನುಗಳಲ್ಲಿ ಸರಕಾರಗಳು ಹಸ್ತಕ್ಷೇಪ ನಡೆಸಿಲ್ಲ ಅಥವಾ ಶರೀಅತ ಪ್ರಕಾರ ಅವುಗಳಲ್ಲಿ ತಿದ್ದುಪಡಿ ಮಾಡಿಲ್ಲ. ಈ ರಂಗದಲ್ಲಿ ಧಾರ್ಮಿಕ ಗುಂಪುಗಳ ವೈಯಕ್ತಿ ಕಾನೂನುಗಳಿಗೆ ಸೆಕ್ಯೂಲರ್ ಸರಕಾರಗಳಿಗಿಂತ ಹೆಚ್ಚಾಗಿ ಇಸ್ಲಾಮೀ ವ್ಯವಸ್ಥೆಯು ಭದ್ರ ಒದಗಿಸುತ್ತದೆ. ಆಧುನಿಕ ಕಾಲದ ಅನುಭವಗಳೂ ಇದಕ್ಕೆ ಸಾಕ್ಷಿಯಾಗಿವೆ.

# ಸಂದೇಶ ಪ್ರಚಾರ ಮತ್ತು ಬಲಾತ್ಕಾರದ ಮತಾಂತರ

ಇಸ್ಲಾಮ್, ಮಾನವರ ಹಸ್ತಕ್ಷೇಪಗಳಿಂದ ವಿರೂಪಗೊಳ್ಳದ ಏಕೈಕ ದೇವದತ್ತ ಜೀವನ ಪದ್ಧತಿಯಾಗಿದೆ. ಅದು ಮಾನವನ ಉಭಯಲೋಕ ವಿಜಯವನ್ನು ಖಚಿತಪಡಿಸುತ್ತದೆ. ಪರಲೋಕ ಮೋಕ್ಷದ ವಾಗ್ದಾನ ನೀಡುವುದರೊಂದಿಗೆ ಭೂಮಿಯಲ್ಲಿ ಸುಖ, ಶಾಂತಿ ಮತ್ತು ಸಮೃದಿಯ ಜೀವನವನ್ನೂ ನೀಡುತ್ತದೆ.

ಗಾಳಿ, ನೀರು, ಸೂರ್ಯ, ಚಂದ್ರ ಎಲ್ಲವೂ ದೇವನದ್ದಾಗಿದೆ. ಸೃಷ್ಟಿಗಳು ಅವುಗಳ ಸಮಾನ ಹಕ್ಕುದಾರರಾಗಿದ್ದಾರೆ. ಇಸ್ಲಾಮ್ ಕೂಡಾ ಹಾಗೆಯೇ. ಅದು ಕೇವಲ ಮುಸ್ಲಿಮ ರದ್ದಲ್ಲ, ಎಲ್ಲ ಮಾನವರಿಗಾಗಿ ದೇವನು ಅವತೀರ್ಣಗೊಳಿಸಿದ್ದಾಗಿದೆ. ಪ್ರವಾದಿ ಮುಹಮ್ಮದ್ ರನ್ನು(ಸ) ಇಡೀ ಜಗತ್ತಿಗಾಗಿ ನೇಮಿಸಲಾಗಿದೆ. ಅಲ್ಲಾಹನು ಹೀಗೆ ಹೇಳಿರುವನು: **'ಪೈಗಂಬರರೇ, ನಾವು ನಿಮ್ಮನ್ನು ಸಕಲ ಲೋಕದವರಿಗೆ ಅನುಗ್ರಹವಾಗಿ ಮಾಡಿ ಕಳುಹಿಸಿ ಸುತ್ತೇವೆ."** **(ಪವಿತ್ರ ಕುರ್‌ಆನ್, 21:107)**

ಆದ್ದರಿಂದ, ಇಸ್ಲಾಮೀ ಸಂದೇಶ ದೊರೆತ ಮುಸ್ಲಿಮರು ಅದು ದೊರತಿಲ್ಲದವರಿಗೆ ತಲಪಿಸುವ ಹೊಣೆಯನ್ನು ಹೊಂದಿದ್ದಾರೆ. ಇದಕ್ಕೆ ಮಾನವರೊಂದಿಗಿನ ಹಿತಾಕಾಂಕ್ಷೆ, ಪ್ರೀತಿ, ಕರುಣೆ ಮತ್ತು ವಾತ್ಸಲ್ಯದ ಭಾವನೆಗಳೇ ಪ್ರೇರಕವಾಗಿದೆ. ದೇವಸಂಪ್ರೀತಿಯ ಅದಮ್ಯ ಆಕಾಂಕ್ಷೆಯು ಆಧಾರವಾಗಿದೆ. ಮರಣೋತ್ತರ ಜೀವನದಲ್ಲಿ ಸುರಕ್ಷಿತವಾದ ಏಕೈಕ ಮಾರ್ಗವೆಂದು ತಾವು ನಂಬುವ ದೈವಿಕ ಜೀವನ ಪದ್ಧತಿಯನ್ನು ದೇಶಬಾಂಧವರಿಗೆ ತಲಪಿಸದಿರಲು ಸಾಧ್ಯವಿದೆಯೇ? ಸತ್ಯವನ್ನು ಗ್ರಹಿಸಿದ ಬಳಿಕವೂ ಅದನ್ನು ಪ್ರಚಾರಗೊಳಿಸ ದವನಿಗಿಂತ ಕ್ರೂರಿ ಮತ್ತು ನೀಚ ಯಾರಿರಬಹುದು? ಆದ್ದರಿಂದ, ಇಸ್ಲಾಮೀ ಸಂದೇಶ ಪ್ರಚಾರವು ಎಲ್ಲ ಮುಸ್ಲಿಮರ ನೈತಿಕ ಮತ್ತು ಧಾರ್ಮಿಕ ಕರ್ತವ್ಯವಾಗಿದೆ. ಕುರ್‌ಆನ್ ಹೀಗೆ ಆಜ್ಞಾಪಿಸಿದೆ.

**"ಓ ಪೈಗಂಬರರೇ, ಯುಕ್ತಿ ಹಾಗೂ ಸದುಪದೇಶದ ಮೂಲಕ ನಿಮ್ಮ ಪ್ರಭುವಿನ**

**ಮಾರ್ಗಕ್ಕೆ ಜನರನ್ನು ಆಹ್ವಾನಿಸಿರಿ ಮತ್ತು ಜನರೊಂದಿಗೆ ಅತ್ಯುತ್ತಮ ರೀತಿಯಿಂದ ವಾದಿಸಿ**
**(ಪವಿತ್ರ ಕುರ್‌ಆನ್, 16:12**

ಧರ್ಮ ಪ್ರಚಾರವೇ ಮುಸ್ಲಿಮರ ಕರ್ತವ್ಯವಾಗಿದೆ. ಅರ್ಥಾತ್ ಇತರರಿಗೆ ಇಸ್ಲಾಮಿ ಸಂದೇಶವನ್ನು ತಲಪಿಸುವ ಕರ್ತವ್ಯ. ಅವರಿಗೆ ಅದನ್ನು ಇತರರು ಅಂಗೀಕರಿಸುವ ಮಾಡುವ ಹೊಣೆಗಾರಿಕೆಯಿಲ್ಲ. ಪ್ರವಾದಿಗಳೂ ಕೂಡಾ ಇತರರು ಧರ್ಮವನ್ನು ಅಂಗೀಕರಿ ವಂತೆ ಮಾಡುವ ಹೊಣೆಗಾರರಾಗಿರಲಿಲ್ಲ. ಅಲ್ಲಾಹನು ಹೀಗೆ ತಿಳಿಸಿರುವನು: "ನ **ಸಂದೇಶವಾಹಕರಿಗೆ ಸುಸ್ಪಷ್ಟ ಆಜ್ಞೆಗಳನ್ನು ತಲಪಿಸುವ ಹೊಣೆಗಾರಿಕೆ ಮಾತ್ರವಿತ್ತೆಂಬುದ ಅರಿತುಕೊಳ್ಳಿರಿ."** **(ಪವಿತ್ರ ಕುರ್‌ಆನ್, 5:9**

**"ಸಂದೇಶವಾಹಕರ ಮೇಲೆ ಸಂದೇಶವನ್ನು ತಲಪಿಸುವ ಹೊಣೆ ಮಾತ್ರವಿದೆ." (ಪವಿ ಕುರ್‌ಆನ್, 5:99)** ಧರ್ಮ ಮತ್ತು ವಿಶ್ವಾಸವನ್ನು ಇತರರ ಮೇಲೆ ಹೇರುವ ಅನುವ ಪ್ರವಾದಿಗಳಿಗೂ ಇಲ್ಲ. ಆದ್ದರಿಂದ, ಮುಸ್ಲಿಮರು ಬಲಾತ್ಕಾರದ ಮತಾಂತರಕ್ಕೆ ಪ್ರಯತ್ನಿಸು ಪ್ರಮೇಯವೇ ಉದ್ಭವಿಸುವುದಿಲ್ಲ.

ಇಸ್ಲಾಮಿನ ಪ್ರಸಾರಕ್ಕೆ ಖಡ್ಗವೇ ಕಾರಣವೆಂಬ ಪ್ರಚಾರವು ಅಸತ್ಯವಾಗಿದೆ. ಇಸ್ಲಾಮಿ ಕ್ಷಿಪ್ರ ಪ್ರಸಾರಕ್ಕೆ, ಅದು ಪ್ರವೇಶಿಸಿದ ದೇಶಗಳ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿ ರಾಜಕೀಯ ಹಿನ್ನೆಲೆಗಳು ಅವಕಾಶ ಒದಗಿಸಿದ್ದುವು. ಇಸ್ಲಾಮಿನ ಪ್ರಸಾರದಲ್ಲಿ ಮುಸ್ಲಿ ಆಡಳಿತಗಾರರು ಮತ್ತು ಚಕ್ರವರ್ತಿಗಳಿಗಿಂತ ಹೆಚ್ಚಾಗಿ ಧರ್ಮ ಪ್ರಚಾರಕರು ಸಕ್ರಿ ರಾಗಿದ್ದರು. ವಿವಿಧ ರಾಷ್ಟ್ರಗಳಲ್ಲಿ ಇಸ್ಲಾಮ್ ಪ್ರಚುರಗೊಂಡ ಹಿನ್ನೆಲೆಯನ್ನು ವಿಸ್ತಾರವ ವಿವರಿಸುತ್ತಾ ಸರ್ ಥಾಮಸ್ ಅರ್ನಾಳ್ಡ್, 'ಇಸ್ಲಾಮ್: ಬೋಧನೆ ಮತ್ತು ಪ್ರಚಾರ' ಎ ವಿಶ್ವವಿಖ್ಯಾತ ಗ್ರಂಥವನ್ನು ಬರೆದಿದ್ದಾರೆ. ಅವರು ಈ ಬೃಹತ್ ಗ್ರಂಥದಲ್ಲಿ, ಇಸ್ಲಾ ಖಡ್ಗದಿಂದ ಪ್ರಸಾರಗೊಂಡಿದೆಯೆಂಬ ಪಾಶ್ಚಾತ್ಯರ ಆರೋಪವನ್ನು ನಿರಾಧಾರವೆಂ ಅಸಂದಿಗ್ಧವಾಗಿ ಸಾಬೀತುಪಡಿಸಿದ್ದಾರೆ.

ಮಧ್ಯಪೂರ್ವದಲ್ಲಿ ಇಸ್ಲಾಮಿನ ಪ್ರಸಾರವನ್ನು ವಿವರಿಸುತ್ತಾ ಅರ್ನಾಳ್ಡ್ ಹೀ ಬರೆದಿದ್ದಾರೆ: ಮೇಲಿನ ಉದಾಹರಣೆಗಳಿಂದ ಕ್ರೈಸ್ತ ಗೋತ್ರಗಳು ಮನಃಪೂರ್ವಕ ಇಸ್ಲಾ ಸ್ವೀಕರಿಸಿದ್ದು ವೆಂದು ನಾವು ಊಹಿಸಬಹುದು. ವಿಜೇತರಾದ ಮುಸ್ಲಿಮರೂ ಅನಂತರ ಮುಸ್ಲಿಮ್ ಪೀಳಿಗೆಗಳೂ ಅವರೊಂದಿಗೆ ತೋರಿದ ಸಹಿಷ್ಣುತೆಯು ಹಾಗೆ ನಿರ್ಧರಿಸ ನಮಗೆ ಪ್ರೇರಕವಾಗಿದೆ. ಮುಸ್ಲಿಮರೊಂದಿಗೆ ಸಹಬಾಳ್ವೆ ನಡೆಸುತ್ತಿರುವ ಕ್ರೈಸ್ತ ಅರಬ ಆ ಸಹಿಷ್ಣುತೆಯ ಜ್ವಲಂತ ಸಾಕ್ಷಿಯಾಗಿದ್ದಾರೆ. ಕಪ್ಪು ಸಮುದ್ರದ ಪೂರ್ವದಲ್ಲಿರು ಅಲ್‌ಕರಾಕ್‌ನಲ್ಲಿ ನಡೆ- ನುಡಿ, ಉಡುಗೆ-ತೊಡುಗೆಗಳಲ್ಲಿ ಮುಸ್ಲಿಮ್ ಅರಬರಿಗಿ ಕಿಂಚಿತ್ತೂ ಭಿನ್ನವಾಗಿಲ್ಲದ ಕ್ರೈಸ್ತ ಅರಬರನ್ನು ನೋಡಿದ ವಿಷಯವನ್ನು ಲಾಯ್ಡ್ ವಿವರಿಸಿದ್ದಾ

ೆದ ಶತಮಾನಗಳ ತನಕ ಇಸ್ಲಾಮ್ ಸ್ವೀಕರಿಸದೆ ಬಾಳಿದ ಕ್ರೈಸ್ತರ ಕುರಿತು ಸೀನಾಯ್ ರ್ವತದ ಸನ್ಯಾಸಿಗಳು ಹೇಳಿದ ಮಾತುಗಳನ್ನು ಬಕಾರ್ಟ್ ಉಲ್ಲೇಖಿಸಿದ್ದಾರೆ: "ಶುದ್ಧ ರಬ್ ರಕ್ತವಿರುವ ಗಸ್ಸಾನ್ ಗೋತ್ರದ ಅನೇಕ ಸದಸ್ಯರು ನಾಲ್ಕನೆಯ ಶತಮಾನದಲ್ಲಿ ಕ್ರೈಸ್ತ ರ್ಮ ಸ್ವೀಕರಿಸಿದರು. ಅವರು ಆ ವಿಶ್ವಾಸವನ್ನು ಈಗಲೂ ಉಳಿಸಿಕೊಂಡು ಪೋಪ್‌ರ ದೇಶದನ್ವಯ ಧಾರ್ಮಿಕ ವ್ಯವಹಾರ ಗಳಿಗೆ ಅರಬಿ ಭಾಷೆಯನ್ನು ಬಳಸುತ್ತಿದ್ದಾರೆ."

**(ಇಸ್ಲಾಮ್ ಬೋಧನೆ ಮತ್ತು ಪ್ರಚಾರ ಪುಟ: 64)**

ಅವರು ಹೀಗೆ ಮುಂದುವರಿಸುತ್ತಾರೆ: "ಕ್ರೈಸ್ತರೊಡನೆ ಮುಸ್ಲಿಮ್ ಆಡಳಿತವು ಾರಂಭದಲ್ಲಿ ತೋರಿದ ಸಹಿಷ್ಣುತೆಯ ಹಿನ್ನೆಲೆಯಲ್ಲಿ ಖಡ್ಗವು ಮತಾಂತರದ ಪ್ರಮುಖ ಉಪಕರಣವೆಂಬ ವಾದವು ತೀರಾ ಬಾಲಿಶವೆನಿಸುತ್ತದೆ." **(Ibid; ಪುಟ: 83)**

ಭಾರತದಲ್ಲಿ ಆಡಳಿತಗಾರರಿಂದ ಇಸ್ಲಾಮ್ ಪ್ರಸಾರಗೊಂಡಿಲ್ಲ. ಆ ಪೈಕಿ ಹಲವರಿಗೆ ಧಾರ್ಮಿಕ ವ್ಯವಹಾರಗಳ ಕುರಿತು ಕಿಂಚಿತ್ತೂ ಆಸಕ್ತಿಯಿರಲಿಲ್ಲ. ಚೆಂಗೀಸ್‌ಖಾನ್ ಮತ್ತು ಹಲಾಕುಖಾನ್‌ನ ನಾಯಕತ್ವದಲ್ಲಿ ಮಂಗೋಲಿಯನರು ನಡೆಸಿದ ಆಕ್ರಮಣದಿಂದ ಪಲಾಯನ ಮಾಡಿದ ಧಾರ್ಮಿಕ ವಿದ್ವಾಂಸರು ಮತ್ತು ಸೂಫೀಸಂತರು ಉತ್ತರ ಭಾರತದಲ್ಲಿ ಇಸ್ಲಾಮಿನ ಪ್ರಚಾರ ನಡೆಸಿದ್ದರು.

ಭಾರತದಲ್ಲಿ ಪ್ರಬಲವಾಗಿದ್ದ ಜಾತಿ ವ್ಯವಸ್ಥೆಯು ಇಲ್ಲಿ ಇಸ್ಲಾಮಿನ ಪ್ರಸಾರಕ್ಕೆ ಅನುಕೂಲವಾಯಿತು. ಸಿ. ಅಚ್ಚುತ ಮೆನನ್ ಹೀಗೆ ಬರೆದಿದ್ದಾರೆ: "ಜಾತಿ ಪದ್ಧತಿಯೇ ಪ್ರಧಾನ ವಿಷಯವಾಗಿತ್ತು. ಇಸ್ಲಾಮ್ ಧರ್ಮವು ಮಾನವ ಹಕ್ಕುಗಳನ್ನು ನಿಷೇಧಿಸಲಾಗಿದ್ದ ಕೋಟ್ಯಾಂತರ ಜನರಿಗೆ ವರದಾನವಾಯಿತು. ಅವರಿಗೆ (ಕೀಳ್ಜಾತಿಯವರಿಗೆ) ಮೂರಡಿಗಿಂತ ಎತ್ತರದ ಗುಡಿಸಲುಗಳಲ್ಲಿ ವಾಸಿಸಲು ಸರಕಾರ ಅನುಮತಿ ನೀಡುತ್ತಿರಲಿಲ್ಲ. ಮೇಲ್ಜಾತಿಯ ವರನ್ನು ಕಂಡಾಗ ಅವರು ಸಾಷ್ಟಾಂಗವೆರಗಬೇಕಾಗಿತ್ತು."

**(Cochin State Manual ಪುಟ: 44)**

ಶೈಕ್ ಝೈನುದ್ದೀನ್ ಮಖ್ದೂಮ್ ಹೀಗೆ ಬರೆದಿದ್ದಾರೆ: "ಇಸ್ಲಾಮಿನ ಪ್ರಚಾರಕ್ಕಾಗಿ ಸಂಚರಿಸುತ್ತಿದ್ದ ಒಂದು ಮುಸ್ಲಿಮ್ ತಂಡವು ಮಲಬಾರ್ ಬಂದರಿಗೆ ಬಂದು ನೆಲೆಸಿತು. ಅವರಿಂದ ಇಸ್ಲಾಮ್ ಧರ್ಮದ ವೈಶಿಷ್ಟ್ಯಗಳನ್ನು ತಿಳಿದುಕೊಂಡ ಮಲಬಾರ್ ನಿವಾಸಿಗಳು ಸಾಮೂಹಿಕವಾಗಿ ಇಸ್ಲಾಮ್ ಸ್ವೀಕರಿಸಲಾರಂಭಿಸಿದರು. ಹೀಗೆ ಮಲಬಾರಿನಲ್ಲಿ ಇಸ್ಲಾಮ್ ಧರ್ಮಕ್ಕೆ ಯೋಗ್ಯ ರೀತಿಯಲ್ಲಿ ಪ್ರಚಾರ ಲಭಿಸಿ ಮುಸ್ಲಿಮರ ಸಂಖ್ಯೆ ಹೆಚ್ಚಿತು."

ಅವರೇ ಮುಂದೆ ಹೀಗೆಂದಿದ್ದಾರೆ: "ಒಬ್ಬ ಹಿಂದು, ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದರೆ ಇತರ ಹಿಂದುಗಳು ಆತನನ್ನು ಹಿಂಸಿಸುತ್ತಿರಲಿಲ್ಲ. ಬದಲಾಗಿ ಆತ ಎಷ್ಟೇ ಕೀಳ್ಜಾತಿಯವನಾಗಿದ್ದರೂ ಇಸ್ಲಾಮ್ ಧರ್ಮ ಸ್ವೀಕರಿಸಿದರೆ ಇತರ ಮುಸ್ಲಿಮರಂತೆಯೇ ಆತನೊಡನೆ ಸೌಹಾರ್ದದಿಂದ ವರ್ತಿಸುತ್ತಿದ್ದರು." **(ತುಹ್‌ಫತುಲ್ ಮುಜಾಹಿದೀನ್ ಪುಟ: 84)**

ಡಾ। ರಾಯ್ ಚೌಧರಿ ಬರೆದಿದ್ದಾರೆ: "ಬಂಗಾಳದ ದಲಿತ ಹಿಂದುಳಿದ ವರ್ಗ
ಇಸ್ಲಾಮ್ ಸಾಂತ್ವನ ಮತ್ತು ನೆಮ್ಮದಿ ನೀಡಿತು. ಸವರ್ಣೀಯರ ಹಿಂಸೆಯಿಂದ ಅವರು
ದೊರೆತಂತೆ ಮುಕ್ತರಾದರು."

**(Dr. Roy Choudhry-History of Muslim rule; P:1**

ಡಾ। ಈಶ್ವರೀ ಪ್ರಸಾದ್ ಹೀಗೆ ಬರೆದಿದ್ದಾರೆ: "ಉನ್ನತ ಪದವಿ ಮತ್ತು ಜಾಗೀರುದಾ
ಹುದ್ದೆಗಳ ಆಸೆಯಿಂದ ಹಲವು ಸವರ್ಣೀಯರು ಮುಸ್ಲಿಮ್ ಆಡಳಿತದಲ್ಲಿ ಇಸ್ಲಾಮ
ಸೇರಿದರು. ಆದರೆ ಕೀಳ್ಜಾತಿಯ ಹಿಂದುಳಿದವರೇ ಬಹುಸಂಖ್ಯೆಯಲ್ಲಿದ್ದರು ಅದಕ್ಕೆ ಹಿಂದ
ಧರ್ಮದಲ್ಲಿದ್ದ ಕ್ರೂರ ಜಾತಿ ಪದ್ಧತಿಯು ಅವರನ್ನು ಮೃಗ ಸಮಾನಗೊಳಿಸಿದ್ದಾ
ಇಸ್ಲಾಮ್ ಸಮಾನತೆ ಮತ್ತು ಸಹೋದರತೆಯ ಕೊಡುಗೆ ನೀಡಿದ್ದೇ ಕಾರಣವಾಗಿತ್ತು."

**(Ram Gopal: Indian Muslims A Political History P:**

ಹಲವು ಕಾಲ ಬಂಗಾಳದ ಸಿವಿಲ್ ಸರ್ವಿಸ್‌ನಲ್ಲಿದ್ದ ಸರ್‌ಹೆನ್ರಿ ಕೋಟನ್ 'India
Home affairs' ಎಂಬ ಕೃತಿಯಲ್ಲಿ ಹೀಗೆ ಬರೆದಿದ್ದಾರೆ: "ಪೂರ್ವ ಬಂಗಾಳದ ಮುಸ್ಲಿ
ರೆಲ್ಲರೂ ಶೋಷಿತ ಹಿಂದುಗಳ ಪೀಳಿಗೆಯವರಾಗಿದ್ದಾರೆ. ಅವರ ಪೂರ್ವಜರು ಸಾಮಾ
ನ್ಯಾಯಕ್ಕಾಗಿ ಇಸ್ಲಾಮ್ ಸ್ವೀಕರಿಸಿದ್ದರು."

**(ಉದ್ಧರಣೆ: ಇತಿಹಾಸ ಅಧ್ಯಯನ, ಪುಟ: 33**

ಭಾರತದಲ್ಲಿ ಮತಾಂತರಕ್ಕೆ ಇಂದಿಗೂ ಜಾತಿ ಪದ್ಧತಿಯು ಪ್ರಮುಖ ಕಾರಣವಾಗಿ
ಆರ್ಯ ಸಮಾಜದ ನಾಯಕ ಸ್ವಾಮಿ ಅಗ್ನಿವೇಶ್‌ರು ಹೀಗೆಂದಿದ್ದಾರೆ: "ಮೀನಾಕ್ಷಿಪುರ
ಹರಿಜನರು ಈಗಲೂ ಹಿಂಸೆಯನ್ನು ಅನುಭವಿಸುತ್ತಿದ್ದಾರೆ. ಅದನ್ನು ಸಹಿಸಲಾಗದೆ ಅಲ್ಲಿ
ಹರಿಜನರು ಇಸ್ಲಾಮ್ ಸ್ವೀಕರಿಸಲು ಮುಂದಾದರು."

**(ಮಲೆಯಾಳ ಮನೋರಮ: 23-7-198**

ಕೆ.ಆರ್. ಮಲ್ಕಾನಿ ಬರೆದಿದ್ದಾರೆ: "ಮುಸ್ಲಿಮರು ಪರಸ್ಪರ ಅಸ್ಪೃಶ್ಯರೆಂದು ಭಾವಿ
ವುದಿಲ್ಲ. ಈ ಧರ್ಮದಲ್ಲಿ ಸಾಮಾಜಿಕ ಮತ್ತು ಮಾನಸಿಕ ಆಕರ್ಷಣೆ ಯಾವಾಗಲೂ ಇತ
ಇಸ್ಲಾಮಿನ ಈ ವೈಶಿಷ್ಟ್ಯವು ಕೆಲವರನ್ನು ಆಕರ್ಷಿಸುತ್ತದೆ. ಆದ್ದರಿಂದ ಮುಸ್ಲಿಮರ
'ಮೀನಾಕ್ಷಿ ಪುರಗಳು' ಲಭಿಸುತ್ತವೆ. ಹೇರಳ ಸಂಖ್ಯೆಯಲ್ಲಿ ಆಫ್ರಿಕನ್ನರೂ ಅಮೇರಿಕ
ಕರಿಯರೂ ಮುಸ್ಲಿಮರಾಗಿ ಪರಿವರ್ತನೆಗೊಳ್ಳುತ್ತಿದ್ದಾರೆ."

**(ಅಸ್ಪೃಶ್ಯರಲ್ಲಿ ಇಸ್ಲಾಮಿನ ಆಕರ್ಷಣೆ. ಸ್ಟೇಟ್ಸ್‌ಮನ**

ಜಗತ್ತಿನ ಇತರೆಡೆಗಳಂತೆಯೇ ಭಾರತದ ಮತಾಂತರಗಳಲ್ಲಿಯೂ ಸರಕಾರದ ಒತ್ತ
ಅಥವಾ ಬಲಾತ್ಕಾರ ಸ್ವಲ್ಪವೂ ಇರಲಿಲ್ಲ. ಹರ್ಬನ್ಸ್‌ಮುಖಿಯ ಹೀಗೆ ಬರೆದಿದ್ದಾ
"ಮತಾಂತರ ನಡೆದಿದೆಯೆಂಬ ವಿಷಯವನ್ನು ಯಾರೂ ನಿರಾಕರಿಸಲಾರರು. ಸಾಮೂಹಿ
ಮಟ್ಟದಲ್ಲಿ ಬಹುವಂಶ ಮನಃಪೂರ್ವಕರಾಗಿಯೇ ನಡೆದಿತ್ತು. ಜನರ ಮಧ್ಯೆ ನೇ

ಅವರೊಡನೆ ಅವರ ಭಾಷೆಯಲ್ಲಿ ಮಾತಾಡುತ್ತಿದ್ದ ಸೂಫೀಸಂತರ ಪ್ರಭಾವವೇ ಅದಕ್ಕೆ ಕಾರಣವಾಗಿರ ಬಹುದು. ಸಾಮೂಹಿಕ ಮಟ್ಟದಲ್ಲಿ ಮತಾಂತರ ನಡೆಸಲು ಸರಕಾರದ ಕಾಳಜಿಯಿರಲಿಲ್ಲ ವೆಂದಷ್ಟೇ ಇಲ್ಲಿ ಸೂಚಿಸುತ್ತಿದ್ದೇನೆ...

"ಅಶೋಕ ಚಕ್ರವರ್ತಿಯು ಬೌದ್ಧ ಧರ್ಮದ ಪ್ರಚಾರ ಮತ್ತು ಜನರ ಮತಾಂತರಕ್ಕಾಗಿ ಆಡಳಿತ ಯಂತ್ರವನ್ನು ಸಕ್ರಿಯವಾಗಿ ಬಳಸಿ ತನ್ನಿಂದ ಸಾಧ್ಯವಿರುವುದನ್ನೆಲ್ಲ ಮಾಡಿದ್ದನು. ಹಾಗಿದ್ದರೂ ನಾವು ಆತನನ್ನು ಮಹಾನ್ ಚಕ್ರವರ್ತಿಯೆಂದು ಪರಿಗಣಿಸುತ್ತೇವೆ. ಅದೇ ವೇಳೆ ಮಧ್ಯಕಾಲೀನ ಭಾರತದಲ್ಲಿ ಸರಕಾರವು ಧರ್ಮಪ್ರಚಾರದಲ್ಲಿ ಭಾಗಿಯಾಗಿರಲಿಲ್ಲ. ಹಾಗಿದ್ದರೂ ಅಂದಿನ ಆಡಳಿತದ ಬಗ್ಗೆ ಜನಮನದಲ್ಲಿ, ಜನರನ್ನು ಕೇವಲ ಇಸ್ಲಾಮಿಗೆ ಸೇರಿಸುವ ಉಪಕರಣವೆಂಬ ಭಾವನೆ ಬೇರೂರಿದೆ. ಅಂತಹ ಧೋರಣೆಗೆ ನಮ್ಮ ಮನದಲ್ಲಿ ಲೀನವಾಗಿರುವ ಕೋಮುಭಾವನೆಯೇ ಪ್ರೇರಕವಾಗಿದೆ.'

**(ಕೋಮುವಾದ ಮತ್ತು ಪ್ರಾಚೀನ ಭಾರತದ ಇತಿಹಾಸ ರಚನೆ. ಪುಟ: 48)**

ಸಿ. ಅಚ್ಚ್ಯುತ ಮೆನನ್ ಬರೆಯುತ್ತಾರೆ: "ವಸ್ತುತಃ ಮಧ್ಯಕಾಲದ ಸರಕಾರಗಳು ಇಸ್ಲಾಮ್ ಧರ್ಮವನ್ನು ಜನರ ಮೇಲೆ ಹೇರಲು ಅಥವಾ ಇಸ್ಲಾಮೀ ಧರ್ಮಾಚಾರದಂತೆ ಆಡಳಿತ ನಡೆಸಲು ಪ್ರಯತ್ನಿಸಿರಲಿಲ್ಲ." **(ಜನಯುಗ ಸಾಪ್ತಾಹಿಕ, 26-11-1978)**

ದಕ್ಷಿಣ ಭಾರತದಲ್ಲಿ ಇಸ್ಲಾಮಿನ ಪ್ರಸಾರದ ಬಗ್ಗೆ ಡಾ| ತಾರಾಚಂದ್ ಹೀಗೆ ಬರೆದಿದ್ದಾರೆ: "ಹತ್ತನೆಯ ಶತಮಾನದ ಕೊನೆಯಲ್ಲಿ ಆಗಮಿಸಿದ ಅರಬರು ಭಾರತಕ್ಕೆ ಬಂದ ಪ್ರಥಮ ಮುಸ್ಲಿಮರಾಗಿದ್ದಾರೆ. ಅವರು ದಕ್ಷಿಣ ಭಾರತದಲ್ಲಿ ಸ್ಥಿರವಾಗಿ ನೆಲೆಸಿದರು. ಹೀಗೆ ಮುಸ್ಲಿಮರ ಪ್ರಭಾವ ಕ್ರಮೇಣ ವ್ಯಾಪಕವಾಯಿತು. ವ್ಯಾಪಾರಿಗಳೆಂಬ ನೆಲೆಯಲ್ಲಿ ಅವರು ಹಾರ್ದಿಕ ಸ್ವಾಗತ ಪಡೆದರು. ಮಲಬಾರಿನ ರಾಜಂದಿರು ಅವರಿಗೆ ಜಮೀನು ಖರೀದಿ ಮತ್ತು ಧರ್ಮಾಚಾರಗಳ ನಿರ್ವಹಣೆಗೆ ಮುಕ್ತ ಅವಕಾಶ ನೀಡಿದರು. ಇಸ್ಲಾಮ್, ಮಾದರೀ ಧರ್ಮವಾಗಿದ್ದುದರಿಂದ ಅದರ ವೈಶಿಷ್ಟ್ಯಗಳನ್ನು ಪ್ರಚಾರಪಡಿಸಿ ಸ್ಥಳೀಯರನ್ನು ಪರಿವರ್ತನೆ ಗೊಳಿಸಲು ಅರಬರಿಗೆ ಕಷ್ಟವಾಗಲಿಲ್ಲ. ಅವರ ವಿಶಿಷ್ಟ ವಿಶ್ವಾಸ, ಆರಾಧನಾ ಕ್ರಮ, ಪ್ರಚಾರ ರೀತಿ ಮತ್ತು ಧ್ಯೇಯ ಇತ್ಯಾದಿಗಳು ಹಿಂದೂ ಜನಸಾಮಾನ್ಯರನ್ನು ಬಹಳವಾಗಿ ಆಕರ್ಷಿಸಿತು."

**(Influence of Islam on Indian Culture, P:33)**

ಬಿ.ಎನ್. ಪಾಂಡೆ ಹೀಗೆ ಬರೆಯುತ್ತಾರೆ: "ದಕ್ಷಿಣ ಭಾರತದಲ್ಲಿ ಇಸ್ಲಾಮಿಗೆ ಬಹಳ ಅನುಕೂಲಕರ ವಾತಾವರಣವಿತ್ತು. ದಕ್ಷಿಣ ಭಾರತದಲ್ಲಿ ಬೌದ್ಧರು ಮತ್ತು ಜೈನರ ಅಧಿಕಾರ ಪೈಪೋಟಿಯಲ್ಲಿ ನವ ಹಿಂದೂವಾದವು ತಲೆಯೆತ್ತಿದುದರಿಂದ ಧಾರ್ಮಿಕ ಸಂಘರ್ಷಗಳು ವ್ಯಾಪಕವಾಗಿದ್ದುವು. ಧಾರ್ಮಿಕ ರಂಗವು ಜನಸಾಮಾನ್ಯರನ್ನು ಭಯಭೀತಗೊಳಿಸಿದಂತಹ ವಾತಾವರಣದಲ್ಲಿ, ಸರಳ ವಿಶ್ವಾಸ ಸಂಹಿತೆ, ಆಚಾರ ಕ್ರಮ ಮತ್ತು ಸ್ಪಷ್ಟ ಕಾನೂನುಗಳನ್ನು ಪ್ರಕಟಪಡಿಸಿ ಇಸ್ಲಾಮ್ ಸಕ್ರಿಯವಾಯಿತು. ಅನೇಕ ವಿವೇಕಮತಿಗಳು ತಾವಾಗಿಯೇ

ಮತಾಂತರಗೊಂಡರು. ಒಂಭತ್ತನೆಯ ಶತಮಾನದ ಮೊದಲ ದಶಕದಲ್ಲಿ ಮಲಬಾರ್ ರಾಜಂದಿರಾದ ಚೇರಮಾನ್ ಪೆರುಮಾಳ್‌ರಲ್ಲಿ ಕೊನೆಯವರೂ ಹೊಸ ಧರ್ಮಕ್ಕೆ ಸೇರಿದರು."

**(ಇಸ್ಲಾಮ್ ಮತ್ತು ಭಾರತೀಯ ಸಂಸ್ಕೃತಿ, ಪುಟ: 96)**

"ಸಾಮೂದಿರಿ ರಾಜನು, ತನ್ನ ಜನರನ್ನು ನುರಿತ ನಾವಿಕರನ್ನಾಗಿ ತರಬೇತಿಗೊಳಿಸ ಬೇಕೆಂಬ ಬಯಕೆಯಿಂದ, ತನ್ನ ದೇಶದ ಪ್ರತಿಯೊಂದು ಬೆಸ್ತ ಕುಟುಂಬದ ಒಂದೆರಡು ಮಂದಿ ಮುಸ್ಲಿಮರಾಗಬೇಕೆಂಬ ಆಜ್ಞೆ ಹೊರಡಿಸಿದ್ದನು."

**(Thara Chand; Infulence of Islam on Indian Culture P:36)**

ಇಸ್ಲಾಮ್ ಬಲಾತ್ಕಾರದ ಮತಾಂತರದಲ್ಲಿ ಎಂದೂ ನಂಬಿಕೆಯಿರಿಸಿಲ್ಲ, ಹಾಗೆಯೇ ಮುಸ್ಲಿಮರು ಮತಾಂತರಕ್ಕೆ ಖಡ್ಗದ ನೆರವು ಪಡೆದಿಲ್ಲ. ಸರ್ ಥಾಮಸ್ ಅರ್ನಾಳ್ಡ್ ಹೀಗೆ ಬರೆದಿದ್ದಾರೆ: "ಇಸ್ಲಾಮಿನ ಪ್ರಚಾರದ ಕಾರಣವನ್ನು ಕಂಡುಹಿಡಿಯಲಿಕ್ಕಾಗಿ, ಒಂದು ಕೈಯಲ್ಲಿ ಕುರ್‌ಆನ್, ಇನ್ನೊಂದು ಕೈಯಲ್ಲಿ ಖಡ್ಗ ಹಿಡಿದು ಬಂದ ಅಜ್ಜಿ ಕಥೆಯ ಯೋಧನ ಬಳಿಗೆ ಹೋಗಬೇಕಾಗಿಲ್ಲ, ಅನೇಕ ವ್ಯಾಪಾರಿಗಳು ಮತ್ತು ಧರ್ಮಪ್ರಚಾರಕರು ನಡೆಸಿದ ಪರಿಶ್ರಮ ಗಳತ್ತ ಕಣ್ಣು ಹಾಯಿಸಬೇಕು.' **(ಇಸ್ಲಾಮ್; ಬೋಧನೆ ಮತ್ತು ಪ್ರಚಾರ)**

ಗಾಂಧೀಜಿಯವರು ಹೀಗೆ ಬರೆದಿದ್ದಾರೆ: "ಇಂದು ಮಾನವ ವರ್ಗದ ಜನರ ಹೃದಯಗಳಲ್ಲಿ ನಿಷ್ಕಳಂಕ ಪ್ರಭಾವ ಬೀರಿರುವ ಓರ್ವರ ಜೀವನದ ಅತ್ಯುತ್ತಮ ಅಂಶವನ್ನು ನಾನು ತಿಳಿಯಬಯಸಿದೆ. ಆ ಕಾಲದ ಜೀವನ ಧಾರೆಯಲ್ಲಿ ಇಸ್ಲಾಮಿಗೆ ಸ್ಥಾನಗಳಿಸಿ ಕೊಟ್ಟದ್ದು ಖಡ್ಗ ವಲ್ಲವೆಂದು ಈಗ ನನಗೆ ಹಿಂದಿಗಿಂತ ಹೆಚ್ಚಾಗಿ ಮನವರಿಕೆಯಾಗಿದೆ. ಪ್ರವಾದಿಯ ನಿಸ್ಪೃಹ ಸರಳತೆ, ಉದಾತ್ತ ಮನೋಬಲ, ಪ್ರತಿಜ್ಞೆಗಳ ಬಗ್ಗೆ ಸುದೃಢ ನಿಷ್ಠೆ, ಅಪಾರತ್ಯಾಗ, ನಿರ್ಭೀತಿ, ದೇವನ ಬಗ್ಗೆ ಮತ್ತು ತನ್ನ ರಾಯಭಾರದಲ್ಲಿರುವ ಪರಮ ವಿಶ್ವಾಸವು ಎಲ್ಲವನ್ನೂ ಅವರ ಮುಂದೆ ತಂದೊಪ್ಪಿಸಿತು, ಎಲ್ಲ ಆತಂಕಗಳನ್ನೂ ನಿವಾರಿಸಲು ಸಹಾಯಕವಾಯಿತು."

**(Young India 16-9-1924)**

ಪಾಶ್ಚಾತ್ಯ ಸಾಹಿತಿ ರಾಬರ್ಟ್‌ಸನ್ ಹೀಗೆ ಬರೆದಿದ್ದಾರೆ: "ಧಾರ್ಮಿಕ ಸ್ಫೂರ್ತಿ ಮತ್ತು ಪರಧರ್ಮೀಯರೊಡನೆ ಸಹಿಷ್ಣುತೆಯ ಸ್ಫೂರ್ತಿಯನ್ನು ಕೇವಲ ಮುಸ್ಲಿಮರು ಮಾತ್ರ ಕಾಯ್ದುಕೊಂಡಿದ್ದರು. ಅವರು ಖಡ್ಗವೆತ್ತಿದ್ದರೂ, ಇಸ್ಲಾಮಿನಲ್ಲಿ ಆಸಕ್ತಿಯಿಲ್ಲದವರಿಗೆ ತಂತಮ್ಮ ಧರ್ಮದಲ್ಲಿಯೇ ಮುಂದುವರಿಯುವ ಅನುಮತಿ ನೀಡಿದ್ದರು."

**(Civilization of Arabs.)**

# ಮುಸ್ಲಿಮ್ ರಾಷ್ಟ್ರದ ಮುಸ್ಲಿಮೇತರ ಪ್ರಜೆಗಳು

ಇಸ್ಲಾಮೀ ರಾಷ್ಟ್ರವು ಧಾರ್ಮಿಕ ಅಲ್ಪಸಂಖ್ಯಾತರ ಪ್ರಾಣ, ಸೊತ್ತು ಮತ್ತು ಮಾನಗಳಿಗೆ ಸಂಪೂರ್ಣ ಭದ್ರತೆ ಒದಗಿಸುತ್ತದೆ. ಅವರ ವಿಶ್ವಾಸ ಸ್ವಾತಂತ್ರ್ಯ, ಆರಾಧನಾ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಕಾನೂನುಗಳನ್ನು ಸಂರಕ್ಷಿಸುತ್ತದೆ. ಇತರ ಲೌಕಿಕ ಜೀವನ ರಂಗಗಳಲ್ಲಿ ಅವರನ್ನು ಮುಸ್ಲಿಮ್ ಪ್ರಜೆಗಳಂತೆಯೇ ಪರಿಗಣಿಸುತ್ತದೆ. ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತರ ಪ್ರಜೆಗಳನ್ನು ಅರಬಿಯಲ್ಲಿ 'ದಿಮ್ಮಿ'ಗಳೆಂದು ಕರೆಯಲಾಗುತ್ತದೆ. ಅರ್ಥಾತ್, "ರಾಷ್ಟ್ರದ ಸಂರಕ್ಷಣೆಯಲ್ಲಿರುವವರು." ಧಾರ್ಮಿಕ ಅಲ್ಪಸಂಖ್ಯಾತರ ಸಂರಕ್ಷಣೆಯ ಕುರಿತು ಪ್ರವಾದಿ ಯವರು ಸ್ಪಷ್ಟ ಆದೇಶಗಳನ್ನು ನೀಡಿದ್ದಾರೆ. ಅವರು ಹೇಳಿರುವರು: "ಎಚ್ಚರ ವಹಿಸಿರಿ, ಮುಸ್ಲಿಮೇತರ ಪ್ರಜೆಗಳನ್ನು ಯಾರಾದರೂ ಹಿಂಸಿಸಿದರೆ, ಅವರ ಮೇಲೆ ಹೊರಲಾಗದ ತೆರಿಗೆ ಹೇರಿದರೆ, ಅವರೊಡನೆ ಕ್ರೂರವಾಗಿ ವರ್ತಿಸಿದರೆ ಅಥವಾ ಅವರ ಹಕ್ಕುಗಳನ್ನು ಮೊಟಕುಗೊಳಿಸಿದರೆ ಅಂತ್ಯದಿನದಲ್ಲಿ ನಾನು ಅಂತಹವರ ವಿರುದ್ಧ ಸ್ವಯಂ ದೂರು ಸಲ್ಲಿಸುತ್ತೇನೆ." (ಅಬೂದಾವೂದ್, ಕಿತಾಬುಲ್ ಜಿಹಾದ್)

ಪ್ರವಾದಿಯವರು(ಸ) ಮತ್ತೊಂದೆಡೆ ಹೇಳಿರುವರು: "ನಮ್ಮ ಓರ್ವ 'ದಿಮ್ಮಿ'ಯನ್ನು ಯಾರಾದರೂ ಹಿಂಸಿಸಿದರೆ ಅಂತ್ಯದಿನದಲ್ಲಿ ನಾನು ಆತನ ವೈರಿಯಾಗುವೆನು. ನಾನು ಯಾವಾತನ ವೈರಿಯಾಗಿ ಬಿಡುವೆನೋ ಆತನನ್ನು ನಾನು ಪರಾಜಿತಗೊಳಿಸುತ್ತೇನೆ."

ಇಸ್ಲಾಮೀ ರಾಷ್ಟ್ರವು ಮುಸ್ಲಿಮೇತರ ಪ್ರಜೆಗಳಿಗೆ ಧಾರ್ಮಿಕ, ಆರ್ಥಿಕ ಮತ್ತು ಸಾಮೂಹಿಕವಾಗಿ ಪ್ರಗತಿ ಸಾಧಿಸುವ ಅವಕಾಶ ನೀಡುತ್ತದೆ. ಅವರನ್ನು ಸರಕಾರಿ ಹುದ್ದೆ ಗಳಲ್ಲಿ ನೇಮಿಸುತ್ತದೆ. ಈ ಎಲ್ಲ ರಂಗಗಳಲ್ಲಿ ಮುಸ್ಲಿಮೇತರರೊಡನೆ ಯಾವುದೇ ರೀತಿಯ ಪಕ್ಷಪಾತವನ್ನೂ ತೋರಿಸುವುದಿಲ್ಲ.

ಪ್ರವಾದಿವರ್ಯರ(ಸ) ದ್ವಿತೀಯ ಉತ್ತರಾಧಿಕಾರಿ ಉಮರ್ ಫಾರೂಕ್ ಮದೀನದ ಪ್ರಧಾನ ಆರ್ಥಿಕ ಅಧಿಕಾರಿಯಾಗಿ ಓರ್ವ ಗ್ರೀಕ್ ಕ್ರೈಸ್ತನನ್ನು ನೇಮಿಸಿದ್ದರು.

ಸರ್ ಥಾಮಸ್ ಅರ್ನಾಳ್ಡ್ ಹೀಗೆ ಬರೆದಿದ್ದಾರೆ: "ಮುಆವಿಯಾರು (661-680)

ಕ್ರೈಸ್ತರನ್ನು ಧಾರಾಳವಾಗಿ ನೌಕರಿಗೆ ನೇಮಿಸಿದ್ದರು. ಆಡಳಿತ ವಂಶದ ಇತರರೂ ಆ ವಾಡಿಕೆಯನ್ನು ಮುಂದುವರಿಸಿದರು. ಕ್ರೈಸ್ತರು ಹಲವೊಮ್ಮೆ ರಾಜಧಾನಿಯಲ್ಲಿ ಉನ್ನತ ಹುದ್ದೆಗಳನ್ನು ವಹಿಸಿದ್ದರು. ಆಸ್ಥಾನ ಕವಿಯಾಗಿದ್ದ ಅಲ್ ಅಖ್ತಲ್ ಓರ್ವ ಕ್ರೈಸ್ತರಾಗಿದ್ದರು. ಡಮಸ್ಕಸ್‌ನ ಸಾತ್ವಿಕನಾಗಿದ್ದ ಯೋಹಾನನ ತಂದೆಯು ಖಲೀಫ ಅಬ್ದುಲ್ ಮಲಿಕ್‌ರ ಸಲಹೆಗಾರರಾಗಿದ್ದರು. ಖಲೀಫ ಅಲ್ ಮುಅ್‌ತಸಿಯವರ ಕಾಲದಲ್ಲಿ ಇಬ್ಬರು ಕ್ರೈಸ್ತ ಸಹೋದರರು ಅವರ ನಂಬಿಗಸ್ಥ ಸಹಚರರಾಗಿದ್ದರು. ಅದರಲ್ಲಿ ಸಲ್‌ಮುಯ್ಯ ಎಂಬವರಿಗೆ ಸರಿಸುಮಾರು ವಿದೇಶಾಂಗ ಕಾರ್ಯದರ್ಶಿಯ ಸ್ಥಾನವಿತ್ತು. ಅವರು ಸಹಿ ಹಾಕದ ರಾಜಕೀಯ ದಾಖಲೆಗಳಿಗೆ ಬೆಲೆಯಿರಲಿಲ್ಲ. ಇಬ್ರಾಹೀಮ್ ಎಂಬ ಇನ್ನೊಬ್ಬರು ರಾಜ ಮೊಹರಿನ ಸಂರಕ್ಷಕರಾಗಿದ್ದರು. ಅವರಿಗೆ ಸಾರ್ವಜನಿಕ ಬೊಕ್ಕಸದ ಉಸ್ತುವಾರಿಯನ್ನು ನೀಡಲಾಗಿತ್ತು. ವಸ್ತುತಃ ಸಾರ್ವಜನಿಕ ಬೊಕ್ಕಸದ ಮಹತ್ವದ ದೃಷ್ಟಿಯಿಂದ ಪರಿಗಣಿಸಿದರೆ ಆ ಹುದ್ದೆಗೆ ಓರ್ವ ಮುಸ್ಲಿಮನನ್ನೇ ನೇಮಿಸಬೇಕಾಗಿತ್ತು.

"ಇಬ್ರಾಹೀಮ್‌ನೊಡನೆ ಖಲೀಫರಿಗೆ ಭಾರೀ ಪ್ರೀತಿಯಿತ್ತು. ರೋಗಪೀಡಿತನಾಗಿದ್ದಾಗ ಅವರು ಇಬ್ರಾಹೀಮ್‌ನನ್ನು ಸಂದರ್ಶಿಸಿದ್ದರು. ಆತನ ಮರಣದಿಂದ ಖಲೀಫರಿಗೆ ತೀವ್ರ ದುಃಖವಾಗಿತ್ತು. ಮೃತ ದೇಹವನ್ನು ಸಂಸ್ಕರಿಸುವುದಕ್ಕಿಂತ ಮುಂಚೆ ಅರಮನೆಗೆ ತರುವಂತೆ ಆಜ್ಞಾಪಿಸಿದ್ದರು. ಅಲ್ಲಿ ಕ್ರೈಸ್ತ ಧರ್ಮವಿಧಿಗಳನ್ವಯ ಮರಣೋತ್ತರ ಕ್ರಿಯೆಗಳನ್ನು ನೆರವೇರಿಸಲಾಯಿತು." **(ಇಸ್ಲಾಮ್, ಬೋಧನೆ ಮತ್ತು ಪ್ರಚಾರ, ಪುಟ: 76)**

ಅವರೇ ಮುಂದುವರಿಸುತ್ತಾರೆ: "ಅಲ್ ಮುಅ್‌ತದ್‌ರ ಆಡಳಿತ ಕಾಲದಲ್ಲಿ ಅಂಬರ್‌ನ ರಾಜ್ಯಪಾಲರಾಗಿದ್ದ ಉಮರ್ ಬಿನ್ ಯೂಸುಫ್ ಓರ್ವ ಕ್ರೈಸ್ತರಾಗಿದ್ದರು. ಓರ್ವ ಕ್ರೈಸ್ತನು ಯೋಗ್ಯನಾಗಿದ್ದರೆ ಆ ಹುದ್ದೆಯನ್ನು ಆತನಿಗೆ ನೀಡಬಹುದೆಂದು ನೇಮಕವನ್ನು ಅಂಗೀಕರಿಸಿ ಖಲೀಫರು ಹೇಳಿದ್ದರು. ಅಲ್‌ಮುಅ್‌ತಮಿದ್‌ರ ಕಾಲದಲ್ಲಿ ವಸ್ತುತಃ ಖಲೀಫರಾಗಿದ್ದ ಅಲ್‌ಮುವಫ್ಫಿಕ್ ಸೇನೆಯ ಉಸ್ತುವಾರಿಯನ್ನು ಇಸ್ರಾಈಲ್ ಎಂಬ ಓರ್ವ ಕ್ರೈಸ್ತನಿಗೆ ನೀಡಿದ್ದರು. ಅವರ ಪುತ್ರ ಅಲ್ ಮುಅ್‌ತದಿದ್‌ನಿಗೆ ಮಾಲಿಕ್ ಬಿನ್ ವಲೀದ್ ಎಂಬ ಕ್ರೈಸ್ತ ಕಾರ್ಯದರ್ಶಿಯಿದ್ದನು. ತರುವಾಯ ಅಲ್ ಮುಕ್ತದಿರ್‌ನ ಕಾಲದಲ್ಲಿ ರಕ್ಷಣಾ ಖಾತೆಯ ಮೇಲ್ವಿಚಾರಣೆಯನ್ನು ಓರ್ವ ಕ್ರೈಸ್ತ ವಹಿಸಿದ್ದನು.

"ದಕ್ಷಿಣ ಪರ್ಶಿಯಾ ಮತ್ತು ಇರಾಕ್‌ನಲ್ಲಿ ಆಡಳಿತ ನಡೆಸಿದ ಬುವೈಹಿದ್ ವಂಶದ ಅದ್ದೌಲನ ಪ್ರಧಾನ ಮಂತ್ರಿ ನಾಸಿರ್ ಬಿನ್ ಹಾರೂನ್ ಎಂಬೋರ್ವ ಕ್ರೈಸ್ತನಾಗಿದ್ದ. ಹಲವು ವರ್ಷಗಳ ಕಾಲ ಸರಕಾರಿ ಕಚೇರಿಗಳಲ್ಲಿ ವಿಶೇಷತಃ ಆರ್ಥಿಕ ಇಲಾಖೆಯಲ್ಲಿ ಕ್ರೈಸ್ತರೇ ಅಧಿಕಾರಿಗಳಾಗಿದ್ದರು. ಕೆಲಕಾಲದ ಬಳಿಕ ಈಜಿಪ್ಟ್‌ನಲ್ಲಿಯೂ ಅದೇ ಸ್ಥಿತಿಯಿತ್ತು. ಅಲ್ಲಿ ಹಲವೊಮ್ಮೆ ನೌಕರಿಯು ಕ್ರೈಸ್ತರ ಏಕಸ್ವಾಮ್ಯವಾಗಿತ್ತು, ವಿಶೇಷತಃ ವೈದ್ಯ ವೃತ್ತಿ." **(Ibid ಪುಟ: 77,78)**

ಮುಹಮ್ಮದ್ ಘಜ್ನಿಯ ಕುರಿತು ಬಿ.ಎನ್. ಪಾಂಡೆ ಹೀಗೆ ಬರೆದಿದ್ದಾರೆ: "ಹಿಂದುಗಳ ಯುದ್ಧ ನೈಪುಣ್ಯದ ಕುರಿತು ಘಜ್ನಿಗೆ ಉತ್ತಮ ಅಭಿಪ್ರಾಯವಿತ್ತೆಂದು ಹೇಳಬಹುದು. ಹಾಗೆಯೇ ಹಿಂದುಗಳೂ ಆತನ ಸೇವೆಯಲ್ಲಿ ಯಾವುದೇ ಲೋಪ ಮಾಡುತ್ತಿರಲಿಲ್ಲ. ಮಹ್ಮೂದ್‌ನ ಪುತ್ರ ಮಸ್‌ಊದ್ ತನ್ನ ಸಹೋದರನ ವಿರುದ್ಧ ಯುದ್ಧದಲ್ಲಿ ಸರ್ವಂತ್ ರಾವ್‌ನನ್ನು ಬಳಸಿದ್ದನು. ಭಾರತ ಸಂಸ್ಥಾನದಲ್ಲಿ ಗಲಭೆಯುಂಟು ಮಾಡಿದ ರಾಜ್ಯಪಾಲ ಅಹ್ಮದ್ ನಿಯಾಲ್‌ನನ್ನು ಜೈಸೇನ್‌ನ ಪುತ್ರ ತಿಲಕನು ಸೋಲಿಸಿದ್ದನು. ತುರ್ಕಿಗಳೊಂದಿಗಿನ ಯುದ್ಧದಲ್ಲಿಯೂ ಅವರು ಹಿಂದೂ ಸೇನೆಯನ್ನೇ ರಚಿಸಿದ್ದರು. ಅವರ ಉತ್ತರಾಧಿಕಾರಿಯು, ರಾಜಕೀಯ ಕಾರಣಗಳಿಗಾಗಿ ಪಲಾಯನ ಮಾಡಿದ್ದ ಘಜ್ನಿಯ ಹಿಂದೂ ದಂಡನಾಯಕ ವಿಜಯರಾಯನನ್ನು ಮರಳಿ ಕರೆಸಿದರು."

**(ಇಸ್ಲಾಮ್ ಮತ್ತು ಭಾರತೀಯ ಸಂಸ್ಕೃತಿ, ಪುಟ: 10)**

ಅವರೇ ಮುಂದುವರಿಸುತ್ತಾರೆ: "ಮುಹಮ್ಮದ್ ಬಿನ್ ಕಾಸಿಮ್ ಬ್ರಾಹ್ಮಣರ ಪ್ರತಿಷ್ಠೆಯನ್ನು ಉಳಿಸಿ ಅವರಿಗೆ ಹಳೆಯ ಪದವಿಗಳನ್ನು ನೀಡುವ ಆಜ್ಞೆಯನ್ನು ಹೊರಡಿಸಿದನು. ಅನ್ಯಾಯ ಮತ್ತು ಹಿಂಸೆಗಳ ವಿರುದ್ಧ ಅವರಿಗೆ ರಕ್ಷಣೆ ನೀಡಿದನು. ಎಲ್ಲರಿಗೂ ಉದ್ಯೋಗ ನೀಡಿದನು." **(Ibid ಪುಟ: 24)**

ಹರ್ಬನ್ಸ್ ಮುಖಿಯ ಹೀಗೆ ಬರೆದಿದ್ದಾರೆ: "ಆಡಳಿತದ ಕೆಳಶ್ರೇಣಿಯು ಸಂಪೂರ್ಣವಾಗಿ ಹಿಂದುಗಳ ಸ್ವಾಧೀನವಿತ್ತು. ಈ ಹಿನ್ನೆಲೆಯಲ್ಲಿ, ತುರ್ಕಿಗಳ ಸಾಮ್ರಾಜ್ಯ ಸ್ಥಾಪನೆಗೆ ಹಿಂದುಗಳು ನೆರವಾಗಿದ್ದರೆಂದು ತಿಳಿಯಬಹುದು. ಅವರೇ ತುರ್ಕಿಗಳಿಗಾಗಿ ಆಡಳಿತ ನಿರ್ವಹಿಸುತ್ತಿದ್ದರು. ಅವರ ನೆರವಿಲ್ಲದಿರುತ್ತಿದ್ದರೆ ತುರ್ಕಿಗಳಿಗೆ ಇಲ್ಲಿ ಹೆಚ್ಚು ಕಾಲ ನೆಲೆ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ. ಆ ಹಿಂದುಗಳು ಆಡಳಿತ ವರ್ಗದ ಭಾಗವೇ ಆಗಿದ್ದರು"

**(ಕೋಮುವಾದ ಮತ್ತು ಪ್ರಾಚೀನ ಭಾರತದ ಇತಿಹಾಸ ರಚನೆ, ಪುಟ: 44,45)**

ಅವರು ಪುನಃ ಬರೆಯುತ್ತಾರೆ: "ಮುಹಮ್ಮದ್ ತುಗ್ಲಕ್‌ನ ಆಡಳಿತ ಕಾಲದಲ್ಲಿ ಅಲಿಶಾ ನಾಥು ಎಂಬಾತನ ದಂಗೆಯ ವಿಷಯವನ್ನು ನೋಡೋಣ. ಓರ್ವ ಖಿಲ್ಜಿಯಾಗಿದ್ದ ನಾಥುನನ್ನು ಒಂದು ನಿರ್ದಿಷ್ಟ ಭೂಪ್ರದೇಶದ ತೆರಿಗೆ ವಸೂಲಿಗಾಗಿ ನೇಮಿಸಲಾಯಿತು. ಕೆಲಕಾಲದ ಬಳಿಕ ನಾಥು ವಿಶ್ವಾಸ ಘಾತವೆಸಗಿ ಭಾರೀ ಪ್ರಮಾಣದಲ್ಲಿ ಹಣ ದುಂದುವೆಚ್ಚ ಮಾಡುತ್ತಿರುವ ವಿಷಯವನ್ನು ಭರ ಎಂಬೋರ್ವ ಹಿಂದು ಸಂಬಂಧಪಟ್ಟವರಿಗೆ ತಿಳಿಸಿದ. ತರುವಾಯ ಪ್ರಸ್ತುತ ಪ್ರದೇಶದ ಅಧಿಕಾರವನ್ನು ಭರನಿಗೆ ವಹಿಸಲಾಯಿತು. ಓರ್ವ ಅವಿಶ್ವಾಸಿಯನ್ನು ತಮ್ಮ ಮೇಲಾಧಿಕಾರಿಯಾಗಿ ನೇಮಿಸಿರುವುದನ್ನು ನಾಥು ಮತ್ತು ಸಹೋದರರು ಪ್ರತಿಭಟಿಸಿದರೂ ಸುಲ್ತಾನ್ ಆ ನೇಮಕವನ್ನು ಹಿಂತೆಗೆದುಕೊಳ್ಳಲಿಲ್ಲ."

**(Ibid ಪುಟ: 45)**

ಬಂಗಾಳದ ಏಶ್ಯಾಟಿಕ್ ಸೊಸೈಟಿ ಜರ್ನಲ್ ಪ್ರಕಟಿಸಿದ ಔರಂಗಝೇಬನ ಆಜ್ಞೆ

ಗಳನ್ನು ಪರಿಶೀಲಿಸುವವರಿಗೆ, ಮೊಗಲರ ಆಡಳಿತಕಾಲದಲ್ಲಿ ಮುಸ್ಲಿಮೇತರ ಪ್ರಜೆಗ
ಅನುಭವಿಸುತ್ತಿದ್ದ ಸುಖಸೌಲಭ್ಯಗಳ ಸಾಮಾನ್ಯ ಚಿತ್ರ ದೊರೆಯುತ್ತದೆ. ಅವರು ಹೊರಡಿಸಿ
ಒಂದು ಆಜ್ಞೆಯಲ್ಲಿ ಹೀಗೆ ಹೇಳಲಾಗಿದೆ: "ಮಾನ್ಯ ರಾಜಾಧಿರಾಜ ರಾಣಾಸಿಂಗ್‌ರು ನಷ
ಸನ್ನಿಧಿಯಲ್ಲಿ ಸಲ್ಲಿಸಿರುವ ಮನವಿಯಲ್ಲಿ ಅವರು ತಮ್ಮ ಧರ್ಮಾಚಾರ್ಯರಾದ ಭಗವ
ಎಂಬ ಬ್ರಾಹ್ಮಣ ಪುರೋಹಿತರಿಗೆ ಬನಾರಸ್‌ನ ಗಂಗಾ ತೀರದ ಮಾಧವರಾವ್ ಮೊಹಲ್ಲದ
ಒಂದು ನಿವಾಸವನ್ನು ಕಟ್ಟಿದ್ದರು, ಕೆಲವು ಸಮಾಜ ದ್ರೋಹಿಗಳು ಭಗವತ್‌ರನ್ನು ಬೆದರಿ
ಹಿಂಸಿಸುತ್ತಿದ್ದಾರೆ, ಈ ಬಗ್ಗೆ ಕೂಡಲೇ ಸೂಕ್ತ ಕ್ರಮಕೈಗೊಳ್ಳಬೇಕೆಂದು ಬಿನ್ನವಿಸಿದ್ದಾರೆ. ನಷ
ಆದೇಶವೇನೆಂದರೆ, ಈ ಆಜ್ಞೆ ತಲಪಿದ ಕೂಡಲೇ ಈಗ ಇರುವ ಹಾಗೂ ಮುಂ
ನೇಮಿಸಲ್ಪಡಬಹುದಾದ ಅಧಿಕಾರಿಗಳನ್ನು ಕರೆಸಿ, ಇದು ನಮ್ಮ ಪಿತ್ರಾರ್ಜಿತ ಸ್ಥಳವಾಗಿದ
ರಣಜಿವ ಮತ್ತು ಆತನ ಸಂತಾನ ಪರಂಪರೆಗಾಗಿ ನಾವು ತೆರಿಗೆಯಿಲ್ಲದೆ ಇನಾಮ್ ನೀಡಿ
ವುದಾಗಿಯೂ ಆದೇಶಿಸಬೇಕು. ಅಲ್ಲಿ ಬ್ರಾಹ್ಮಣ ಪುರೋಹಿತರು ಮತ್ತು ಭಕ್ತ ಜನರಿಗಾ
ನಿರ್ಮಿಸಬಯಸುವ ಕಟ್ಟಡಗಳ ಕೆಲಸಕ್ಕೆ ಯಾವುದೇ ರೀತಿಯ ಅಡ್ಡಿಯುಂಟು ಮಾಡಬಾ
ದೆಂದೂ ತಿಳಿಸಬೇಕು. ಅವರು ನೆಮ್ಮದಿಯಿಂದ ಅವರ ಕೆಲಸಗಳಲ್ಲಿ ನಿರತರಾಗಿ, ದೇ
ವತಿಯಿಂದ ಲಭಿಸಿರುವ ಹಾಗೂ ಶಾಶ್ವತವಾಗಿ ಉಳಿಯಬೇಕಾದ ನಮ್ಮ ದೇಶದ ಕ್ಷೇಮ
ಭಿವೃದ್ಧಿಗಳಿಗಾಗಿ ನಿರ್ವಿಘ್ನವಾಗಿ ಪ್ರಾರ್ಥಿಸಲು ಅನುವು ಮಾಡಿಕೊಡಬೇಕು. ತನ್ಮೂಲ
ನಮ್ಮ ಪ್ರೀತಿಯ ಮಕ್ಕಳು, ಮಾನ್ಯ ಮಂತ್ರಿವರ್ಯರು, ಸರದಾರರು, ಅಧಿಕಾರಿಗಳು
ಸರಪಂಚರು, ಈಗಿನ ಮತ್ತು ಮುಂದಿನ ಕೊತವಾಲರು ಈ ರಾಜಾಜ್ಞೆಯನ್ನು ಅನೂಚಾನವಾ
ಪಾಲಿಸಬೇಕು. ಹಾಗೆಯೇ ಈ ಸ್ಥಳಗಳು ಪ್ರಸ್ತುತ ಜನರ ಕೈಸೇರಿ ಅವರು ಮತ್ತು ಅವ
ಪೀಳಿಗೆಯವರು ತಲೆತಲಾಂತರಗಳ ತನಕ ಇಲ್ಲಿ ನೆಲೆಸಿ, ಈ ಸ್ಥಳಕ್ಕೆ ಯಾವುದೇ ತೆರಿ
ಅಥವಾ ಸುಂಕ ವಿಧಿಸದಂತೆ ಕಟ್ಟೆಚ್ಚರ ವಹಿಸಬೇಕೆಂದು ನಾವು ಆಜ್ಞಾಪಿಸುತ್ತಿದ್ದೇವೆ. ಮಾತ್ರವ
ವರ್ಷಂಪ್ರತಿ ದಾಖಲೆ ಪತ್ರ ನವೀಕರಿಸುವಂತೆ ಅವರನ್ನು ಒತ್ತಾಯಿಸಬಾರದು."

**(ಬಂಗಾಳ ಏಶ್ಯಾಟಿಕ್ ಸೊಸೈಟಿ ಜರ್ನಲ್, 1911, ಪುಟ: 689)**

ಬಗ್ದಾದ್‌ನಲ್ಲಿ ಬ್ರಾಹ್ಮಣ ವಿದ್ವಾಂಸರ ಪ್ರಭಾವವನ್ನು ವಿವರಿಸುತ್ತಾ ಬಿ.ಎನ್.ಪಾಂಡ
ಹೀಗೆ ಬರೆದಿದ್ದಾರೆ: "ನೋವು ಕಡಿಮೆಯಾಗದ ತನ್ನ ರೋಗದ ಚಿಕಿತ್ಸೆಗಾಗಿ ಖಲೀಫ
ಹಾರೂನ್ ಓರ್ವ ಭಾರತೀಯ ವೈದ್ಯರನ್ನು ಕರೆಸಿದರೆಂದು ತ್ವಬ್ರಿ ಉಲ್ಲೇಖಿಸಿದ್ದಾರೆ.
ಆಡಳಿತದ ವ್ಯಾವಹಾರಿಕ ಅಂಶಗಳ ಕುರಿತು ಅರಬರು ಭಾರತೀಯರಿಂದ ಬಹಳಷ್ಟು
ಕಲಿತಿದ್ದರು. ಬ್ರಾಹ್ಮಣ ಅಧಿಕಾರಿಗಳ ಪಾಂಡಿತ್ಯ, ಅನುಭವ, ಆಡಳಿತ ನೈಪುಣ್ಯ ಇತ್ಯಾದಿಗಳು
ಅವರ ನೇಮಕಕ್ಕೆ ಪ್ರಮುಖ ಕಾರಣವಾಗಿತ್ತು. ಅನಂತರದ ಕಾಲದಲ್ಲಿ ಐರೋಪ್ಯ ನಾಗರಿಕತೆ
ಯಲ್ಲಿ ವಿಸ್ಮಯಕಾರಿ ಸ್ಪಂದನಗಳನ್ನು ಸೃಷ್ಟಿಸಿದ ಅರಬ್ ಸಂಸ್ಕೃತಿಯ ಹಲವು ಉತ್ತಮ
ಅಂಶಗಳು ವಸ್ತುತಃ ಭಾರತದಿಂದ ಎರವಲು ಪಡೆದುದಾಗಿದೆ. ತತ್ವಶಾಸ್ತ್ರ, ಜ್ಯೋತಿಷ್ಯ,

ಗಣಿತ, ರಸಾಯನ, ವೈದ್ಯಕೀಯ ಶಾಸ್ತ್ರ ಇತ್ಯಾದಿ ವಿಜ್ಞಾನ ಶಾಖೆಗಳ ವಿದ್ಯೆ ಗಳಿಸುವುದಕ್ಕಾಗಿ ಅರಬ್ ವಿದ್ವಾಂಸರು, ಬೌದ್ಧ ಭಿಕ್ಷುಗಳು ಮತ್ತು ಬ್ರಾಹ್ಮಣ ವಿದ್ವಾಂಸರ ಬಳಿ ಸೇರಿದ್ದರು. ಬಗ್ದಾದ್‌ನ ರಾಜ ದರ್ಬಾರು ಭಾರತೀಯ ಪಾಂಡಿತ್ಯವನ್ನು ಪೋಷಿಸಿ ಬೆಳೆಸಿತ್ತು. ಖಲೀಫ ಮನ್ಸೂರ್‌ರ ಕಾಲದಲ್ಲಿ "ಅರಬ್ ವಿದ್ವಾಂಸರು ಭಾರತದಿಂದ ಎರಡು ಗ್ರಂಥಗಳೊಂದಿಗೆ ಮರಳಿದ್ದರು. ಬ್ರಹ್ಮಗುಪ್ತರ 'ಬ್ರಹ್ಮಸಿದ್ಧಾಂತ' ಮತ್ತು 'ಖಂದ್‌ಖಡ್‌ಯಾಗ'ವೆಂಬ ಇನ್ನೊಂದು ಕೃತಿ."
**(ಇಸ್ಲಾಮ್ ಮತ್ತು ಭಾರತೀಯ ಸಂಸ್ಕೃತಿ, ಪುಟ: 12)**

ಖ್ಯಾತ ಇತಿಹಾಸಗಾರ ಡಾ| ತಾರಾ ಚಂದ್ ಹೀಗೆ ಬರೆದಿದ್ದಾರೆ: "ಮುಸ್ಲಿಮ್ ಚಕ್ರವರ್ತಿಗಳು ಮೂಲತಃ ಸಹಿಷ್ಣುಗಳಾಗಿದ್ದರು. ಅದಲ್ಲದೆ ರಾಷ್ಟ್ರಹಿತಾಸಕ್ತಿಯೂ ಅವರನ್ನು ಸಹಿಷ್ಣುತೆಗೆ ಪ್ರೇರೇಪಿಸಿತ್ತು. ಮುಸ್ಲಿಮ್ ಸರಕಾರಗಳಲ್ಲಿ ಹಿಂದುಗಳಿಗೆ ಉದ್ಯೋಗ ದೊರೆಯಿತು. ಕೆಲವೊಮ್ಮೆ ಅವರು ಉನ್ನತ ಸ್ಥಾನಗಳನ್ನೂ ಹೊಂದಿದ್ದರು."
**(ಉದ್ಧರಣೆ: ಜಾತ್ಯತೀತತೆ ಮತ್ತು ಭಾರತೀಯ ಮುಸ್ಲಿಮರು, ಪುಟ: 57)**

ಟಿಪ್ಪುಸುಲ್ತಾನರ ಕಾಲದಲ್ಲಿ ದಿವಾನರಾಗಿ ಪೂರ್ಣಯ್ಯ, ಕೋಶಾಧಿಕಾರಿಯಾಗಿ ಕೃಷ್ಣರಾವ್, ಪೊಲೀಸ್ ಮಹಾ ನಿರ್ದೇಶಕರಾಗಿ ಶಾಮಯ್ಯ ನೇಮಕ ಗೊಂಡಿದ್ದರು. ಶಾಮಯ್ಯರ ಸಹೋದರರಾದ ರಂಗಯ್ಯಂಗಾರ್ ಮತ್ತು ನರಸಿಂಹರಾವ್ ಉನ್ನತ ಹುದ್ದೆ ಗಳಲ್ಲಿದ್ದರು. ಟಿಪ್ಪುವಿನ ತಾಂತ್ರಿಕ ಪ್ರತಿನಿಧಿಗಳಾಗಿ ಶ್ರೀನಿವಾಸರಾವ್, ಅಪ್ಪಾಜಿರಾವ್, ಮೂಲ್‌ಚಂದ್, ಸುಚನ್‌ರಾಯ್, ನಾಯಕ್ ರಾವ್, ನಾಗಪ್ಪಯ್ಯ ಮತ್ತು ನಾರಾಯಣಯ್ಯ ರಿಗೆ ಉನ್ನತ ಸ್ಥಾನವಿತ್ತು. ಸುಬ್ಬರಾವ್, ಟಿಪ್ಪುವಿನ ಪ್ರಧಾನ ಸಲಹೆಗಾರರಾಗಿದ್ದರು. ಅಪ್ಪುರಾವ್, ಹರಿಸಿಂಗ್, ಶ್ರೀ ಪದ್ಮರಾವ್, ರಾಮರಾವ್ ಮುಂತಾದವರು ಅವರ ದಳಪತಿಗಳಲ್ಲಿ ಪ್ರಮುಖರಾಗಿದ್ದರು. ನಾಗರಿಕ ಆಡಳಿತ ವ್ಯವಹಾರಗಳಲ್ಲಿಯೂ ಬಹುಮಂದಿ ಹಿಂದೂ ಅಧಿಕಾರಿಗಳಿದ್ದರು. ಧಾರ್ಮಿಕ ಪಕ್ಷಪಾತಿಯೆಂದು ಆರೋಪಿಸಲ್ಪಡುವ ಟಿಪ್ಪು ಕೂಡಾ ಪರಧರ್ಮೀಯರೊಡನೆ ಬಹಳ ಉದಾರವಾಗಿ ವರ್ತಿಸುತ್ತಿದ್ದರೆಂದು ಈ ವಾಸ್ತವಿಕತೆ ಗಳಿಂದ ವ್ಯಕ್ತವಾಗುತ್ತದೆ.

ಬಿ.ಎನ್. ಪಾಂಡೆ ಬರೆಯುತ್ತಾರೆ: "ಇಸ್ಲಾಮ್ ಧರ್ಮವು ಕಟುಸದಾಚಾರ ನಿಷ್ಠೆ ಮತ್ತು ಗೌರವ ನಯವಿನಯಗಳನ್ನು ಬೆಳೆಸಿ ಭಾರತದಲ್ಲಿ ಹಿಂದೂ ಧರ್ಮದ ಜತೆ ಸಹಕರಿಸಿ ಚಿತ್ರಕಲೆ, ವಾಸ್ತುಶಿಲ್ಪ, ಸಂಗೀತ, ಕಾವ್ಯ ಹಾಗೂ ಸ್ನೇಹ ಸೌಹಾರ್ದ ಪ್ರೇರಿತ ಧರ್ಮದ ಕೀರ್ತಿಸ್ತಂಭವನ್ನು ನಿರ್ಮಿಸಿ ಮಧ್ಯಕಾಲೀನ ಶತಮಾನದ ಭಾರತೇತಿಹಾಸ ಪರಂಪರೆಗೆ ತಿಲಕ ವಿರಿಸಿತು."
(ಇಸ್ಲಾಮ್ ಮತ್ತು ಭಾರತೀಯ ಸಂಸ್ಕೃತಿ, ಪುಟ: 47)

ಅವರು ಮುಂದುವರಿಸುತ್ತಾರೆ: "ಸಾರ್ವಜನಿಕ ಹಿತಸಾಧನೆ ಮತ್ತು ನಿರಂತರ ಸಂಘರ್ಷಗಳಿಂದ ಸಂರಕ್ಷಿಸಲಿಕ್ಕಾಗಿ ಜನರಲ್ಲಿ ಭ್ರಾತೃತ್ವ ಮತ್ತು ಒಗ್ಗಟ್ಟು ಮೂಡಿಸಬೇಕಾಗಿತ್ತು. ಧರ್ಮಸಹಿಷ್ಣುತೆ, ರಾಜಕೀಯ-ಸಾಂಸ್ಕೃತಿಕ ಮೈತ್ರಿ, ಭಾವೈಕ್ಯ ಮತ್ತು ಜಾತ್ಯತೀತ ದೃಷ್ಟಿಕೋನ

ಅತ್ಯಗತ್ಯವಾಗಿತ್ತು. ಮೊಗಲರಿಗೆ ಈ ಮಹಾಯಾಗದ ನಿರ್ವಹಣೆಯ ಹೊಣೆ ವಹಿಸಲ್ಪಟ್ಟಿತ್ತು.

(Ibid ಪುಟ: 8(

ಇಸ್ಲಾಮೀ ರಾಷ್ಟ್ರವು ಮುಸ್ಲಿಮೇತರ ಪ್ರಜೆಗಳಿಗೆ ಸಂಪೂರ್ಣ ಧಾರ್ಮಿಕ ಸ್ವಾತಂತ್ರ ಮತ್ತು ಪ್ರಾಣ ಸೊತ್ತು ವಿತ್ತಗಳಿಗೆ ರಕ್ಷಣೆಯನ್ನು ಒದಗಿಸಿತ್ತು. ಪ್ರವಾದಿವರ್ಯರು(ಸ) ಹೀ ಹೇಳಿದ್ದರು: "ಓರ್ವ ಮುಸ್ಲಿಮನ ರಕ್ತವು ಪಾವನವಾಗಿರುವಷ್ಟೇ ಓರ್ವ ಮುಸ್ಲಿಮೇತ ಪ್ರಜೆಯ ರಕ್ತವೂ ಪಾವನವಾಗಿದೆ."

ಅವರು ಪುನಃ ಹೇಳಿದ್ದಾರೆ: "ಓರ್ವ 'ದಿಮ್ಮಿ' (ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತ ಪ್ರಜೆ)ಯನ್ನು ಹಿಂಸಿಸುವಾತನಿಗೆ ಸ್ವರ್ಗದ ಪರಿಮಳವೂ ದೊರೆಯಲಾರದು."

ಪ್ರಥಮ ಖಲೀಫ ಹ. ಅಬೂಬಕರ್ ತಿಳಿಸಿರುತ್ತಾರೆ: "ಸಂರಕ್ಷಣೆಯಲ್ಲಿರುವ ಯಾ ಮುಸ್ಲಿಮೇತರ ಪ್ರಜೆಯನ್ನೂ ವಧಿಸಬಾರದು. ನೀವು ಹಾಗೆ ಮಾಡಿದರೆ ದೇವ ಕೋಪ ಗುರಿಯಾಗುವಿರಿ ಮತ್ತು ನಿಮ್ಮನ್ನು ನರಕಕ್ಕೆ ಹಾಕಲಾಗುವುದು."

(ಉದ್ಧರಣೆ: ಇಬ್ನು ಸಅದ್, ತ್ವಬಖಾತ್

ಉಮರ್ ಫಾರೂಕ್ ತಮ್ಮ ದಂಡನಾಯಕರಿಗೆ ನೀಡಿದ ಸಂದೇಶದಲ್ಲಿ, "ಮುಸ್ಲಿಮೇತ ಪ್ರಜೆಗಳನ್ನು ಹಿಂಸಿಸಬಾರದು, ಅವರ ಸೊತ್ತುಗಳನ್ನು ನಾಶಪಡಿಸಬಾರದೆಂದು ಮುಸ್ಲಿಮರಿ ಎಚ್ಚರಿಕೆ ನೀಡಿದ್ದರು. ಒಪ್ಪಂದದ ಇತರ ಶರ್ತಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ವಿಶೇಷವಾಗಿ ತಿಳಿಸಿದ್ದರು."

(ತ್ವಬ್ರಿ)

ಹೀಗೆ ಇಸ್ಲಾಮೀ ರಾಷ್ಟ್ರವು ಮುಸ್ಲಿಮೇತರ ಪ್ರಜೆಗಳ ಸಂರಕ್ಷಣೆಯನ್ನು ವಹಿ ಅವರಿಗೆ ಮುಸ್ಲಿಮರಿಗಿರುವಂತಹ ಎಲ್ಲ ಅಧಿಕಾರ ಮತ್ತು ಹಕ್ಕುಗಳನ್ನು ನೀಡುತ್ತದೆ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ರಂಗಗಳಲ್ಲಿ ಪ್ರಗತಿ ಸಾಧಿಸುವ ಅವಕಾ ವನ್ನೂ ಅವರಿಗೆ ಒದಗಿಸುತ್ತದೆ. ಇಂದು ಹಲವು ಜಾತ್ಯತೀತ ಸಮಾಜಗಳಲ್ಲಿ ಧಾರ್ಮಿ ಅಲ್ಪಸಂಖ್ಯಾತರು ಅನುಭವಿಸುತ್ತಿರುವುದಕ್ಕಿಂತ ಹೆಚ್ಚಿನ ಹಕ್ಕು, ಸಮಾನತೆ, ಧರ್ಮಾಧಿಷ್ಠಿ ಇಸ್ಲಾಮೀ ರಾಷ್ಟ್ರದಲ್ಲಿ ಮುಸ್ಲಿಮೇತರ ಪ್ರಜೆಗಳಿಗೆ ದೊರೆಯುತ್ತಿರುವುದರಲ್ಲಿ ಸಂದೇಹವಿಲ್ಲ ಅದಕ್ಕೆ ಗತಕಾಲೀನ ಶತಮಾನಗಳು ಮತ್ತು ಸಮಕಾಲೀನ ಸಮಾಜಗಳು ಸಾಕ್ಷಿಯಾಗಿವೆ.

# ನ್ಯಾಯ ಪಾಲನೆಯಲ್ಲಿ ಸಹಿಷ್ಣುತೆ

ನ್ಯಾಯವು ಇಸ್ಲಾಮಿನ ಉತ್ಕೃಷ್ಟ ಮೌಲ್ಯಗಳಲ್ಲಿ ಅತ್ಯಧಿಕ ಮಹತ್ವದ್ದಾಗಿದೆ. ಸತ್ಯವಿಶ್ವಾಸಿಯು ಸದಾ ಒಳಿತಿನ ಮಾದರಿ ಮತ್ತು ನ್ಯಾಯದ ಪಾಲಕನಾಗಿರಬೇಕು.

"ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಆಪ್ತೇಷ್ಟರ ಬಗ್ಗೆ ಸೌಜನ್ಯದ ಆಜ್ಞೆ ನೀಡುತ್ತಾನೆ." (ಪವಿತ್ರ ಕುರ್‌ಆನ್, 16:90)

"ನ್ಯಾಯವನ್ನು ಪಾಲಿಸಿರಿ. ಅಲ್ಲಾಹನು ನ್ಯಾಯ ಪರಿಪಾಲಕರನ್ನು ಪ್ರೀತಿಸುತ್ತಾನೆ." (ಪವಿತ್ರ ಕುರ್‌ಆನ್, 49:9)

ನ್ಯಾಯ ಸ್ಥಾಪನೆಯು ಪ್ರವಾದಿಯವರ ನೇಮಕದ ಪ್ರಮುಖ ಉದ್ದೇಶಗಳಲ್ಲೊಂದಾಗಿದೆ.

"ನಾವು ನಮ್ಮ ಸಂದೇಶವಾಹಕರನ್ನು ಸುವ್ಯಕ್ತ ನಿದರ್ಶನಗಳು ಮತ್ತು ಸನ್ಮಾರ್ಗದರ್ಶನದೊಂದಿಗೆ ಕಳುಹಿಸಿದೆವು. ಜನರು ನ್ಯಾಯದಲ್ಲಿ ಸ್ಥಿರವಾಗಿ ನಿಲ್ಲಲೆಂದು ಅವರ ಜೊತೆ ಗ್ರಂಥ ಮತ್ತು ತಕ್ಕಡಿಯನ್ನು ಅವತೀರ್ಣಗೊಳಿಸಿದೆವು." (ಪವಿತ್ರ ಕುರ್‌ಆನ್, 57:25)

ನ್ಯಾಯಪಾಲನೆಯಿಂದ ತನಗೂ ತನ್ನವರಿಗೂ ಕಷ್ಟನಷ್ಟ ಸಂಭವಿಸುವುದಿದ್ದರೂ ಓರ್ವ ಮುಸ್ಲಿಮನು ಅದನ್ನು ಪಾಲಿಸಲೇಬೇಕು. ಕುರ್‌ಆನ್ ಆಜ್ಞಾಪಿಸಿರುತ್ತದೆ:

"ಓ ಸತ್ಯವಿಶ್ವಾಸಿಗಳೇ, ನೀವು ನ್ಯಾಯದ ಧ್ವಜವಾಹಕರೂ ಅಲ್ಲಾಹನಿಗಾಗಿ ಸಾಕ್ಷ್ಯ ವಹಿಸುವವರೂ ಆಗಿರಿ. ನಿಮ್ಮ ನ್ಯಾಯ ಮತ್ತು ಸಾಕ್ಷ್ಯವು ಸ್ವತಃ ನಿಮ್ಮ ಅಥವಾ ನಿಮ್ಮ ಮಾತಾಪಿತರ ಮತ್ತು ನಿಮ್ಮ ಸಂಬಂಧಿಕರ ವಿರುದ್ಧವಾಗಿದ್ದರೂ ಸರಿಯೇ. ಕಕ್ಷಿಯು ಧನಿಕನಿರಲಿ ಅಥವಾ ಬಡವನಿರಲಿ, ನಿಮಗಿಂತ ಹೆಚ್ಚಾಗಿ ಅಲ್ಲಾಹನು ಅವರ ಹಿತಚಿಂತಕನಾಗಿರುತ್ತಾನೆ. ಆದುದರಿಂದ ನಿಮ್ಮ ಚಿತ್ತಾಸಕ್ತಿಯ ಅನುಸರಣೆಯಲ್ಲಿ ನ್ಯಾಯ ಪರಿಪಾಲನೆಯಿಂದ ಸರಿಯಬೇಡಿರಿ." (ಪವಿತ್ರ ಕುರ್‌ಆನ್, 4:135)

ಸ್ವಸಮುದಾಯ ಮತ್ತು ಸೌಹಾರ್ದದಲ್ಲಿರುವವರೊಡನೆ ಮಾತ್ರವಲ್ಲ, ಶತ್ರು

ಗಳೊಡನೆಯೂ ನ್ಯಾಯ ಪಾಲಿಸಲು ಸತ್ಯವಿಶ್ವಾಸಿಗಳು ಆಜ್ಞಾಪಿಸಲ್ಪಟ್ಟಿದ್ದಾರೆ-

"ಓ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗಾಗಿ ಸತ್ಯದಲ್ಲೇ ನೆಲೆನಿಲ್ಲುವವರೂ ನ್ಯಾಯದ ಸಾಕ್ಷ್ಯ ವಹಿಸುವವರೂ ಆಗಿರಿ. ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ." (ಪವಿತ್ರ ಕುರ್‌ಆನ್, 5:8)

"ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರದವರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ. ಅಲ್ಲಾಹನು ನ್ಯಾಯ ಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ." (ಪವಿತ್ರ ಕುರ್‌ಆನ್, 60:8)

ಪ್ರವಾದಿಯವರ(ಸ) ಕಾಲದಲ್ಲಿ ಝುಫರ್ ಗೋತ್ರದ ಬಶೀರ್ ಬಿನ್ ಉಬೈರಿಕ್ ಎಂಬಾತನು ಓರ್ವ ಅನ್ಸಾರಿಯ ಯುದ್ಧ ಕವಚವನ್ನು ಕದ್ದನು. ಕಾಣೆಯಾದ ಕವಚದ ವಾರೀಸುದಾರನು ಅದನ್ನು ಹುಡುಕಲಾರಂಭಿಸಿದಾಗ ಆತನು ಓರ್ವ ಯಹೂದಿಯ ಬಳಿ ಅಡವಿರಿಸಿದನು. ಕಳವಿನ ಮಾಲು ಪತ್ತೆಯಾದಾಗ ಆ ಬಗ್ಗೆ ಪ್ರವಾದಿಯವರಿಗೆ ದೂರು ಸಲ್ಲಿಸಿದರು. ಆಗ ಯಹೂದಿಯು ಪ್ರಕರಣದ ವಾಸ್ತವಿಕಾಂಶವನ್ನು ತಿಳಿಸಿದ. ಹಾಗಿದ್ದರೂ ಬಶೀರ್ ಬಿನ್ ಉಬೈರಿಕ್ ಅದನ್ನು ಅಲ್ಲಗಳೆದನು. ಮಾತ್ರವಲ್ಲ, ಆರೋಪವನ್ನು ಆ ನಿರಪರಾಧಿಯ ಮೇಲೆಯೇ ಹೊರಿಸಿದನು. ಆತನ ಸಂಬಂಧಿಕರು ಮತ್ತು ಮಿತ್ರರು ಆತನ ಪಕ್ಷ ವಹಿಸಿ ಹೀಗೆಂದರು: "ಈತನೋರ್ವ ಯಹೂದಿ. ಈತನ ಮಾತುಗಳನ್ನು ನಂಬಲು ಸಾಧ್ಯವಿಲ್ಲ. ವಿಶ್ವಾಸಿಗಳಾಗಿರುವ ನಮ್ಮ ಮಾತಿಗೆ ಬೆಲೆ ನೀಡಬೇಕು."

ಸಮಾಜ ಮತ್ತು ಸನ್ನಿವೇಶದ ಸಾಕ್ಷ್ಯವು ಯಹೂದಿಯ ವಿರುದ್ಧವಾಗಿದ್ದುದರಿಂದ ಪ್ರವಾದಿಯವರ(ಸ) ಮನಸ್ಸು ಕೂಡಾ ಅತ್ತ ವಾಲುತ್ತಿತ್ತು. ಹಾಗಿದ್ದರೂ ತೀರ್ಪು ನೀಡಿರಲಿಲ್ಲ. ಅದಕ್ಕಿಂತ ಮುಂಚೆಯೇ ಅಲ್ಲಾಹನು ಪವಿತ್ರ ಕುರ್‌ಆನಿನ ಮೂಲಕ ಆತನ ನಿರಪರಾಧಿತ್ವವನ್ನು ತಿಳಿಸಿ ನೈಜ ಅಪರಾಧಿಯನ್ನು ಬಹಿರಂಗಪಡಿಸಿದನು. ಮುಸ್ಲಿಮರ ವಿರುದ್ಧ ಮತ್ತು ಯಹೂದಿಯ ಪರವಾಗಿ ಅವತೀರ್ಣಗೊಂಡ ದೇವವಚನ ಹೀಗಿದೆ:

"ಓ ಪೈಗಂಬರರೇ ಅಲ್ಲಾಹ್ ನಿಮಗೆ ತೋರಿಸಿಕೊಟ್ಟ ಪ್ರಕಾರ ಜನರ ನಡುವೆ ತೀರ್ಪು ನೀಡಲಿಕ್ಕಾಗಿ ನಾವು ನಿಮ್ಮ ಮೇಲೆ ಈ ಗ್ರಂಥವನ್ನು ಸತ್ಯ ಸಹಿತ ಅವತೀರ್ಣಗೊಳಿಸಿದ್ದೇವೆ. ನೀವು ಅಪ್ರಾಮಾಣಿಕರ ಪರವಾಗಿ ವಾದಿಸುವವರಾಗಬೇಡಿರಿ. ಪಾಪ ವಿಮೋಚನೆಗಾಗಿ ಅಲ್ಲಾಹನನ್ನು ಪ್ರಾರ್ಥಿಸಿರಿ. ಅವನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ. ಆತ್ಮವಂಚನೆ ಮಾಡುವವರನ್ನು ನೀವು ಸಮರ್ಥಿಸಬೇಡಿರಿ. ನಿಶ್ಚಯವಾಗಿಯೂ ವಿಶ್ವಾಸ ಘಾತಕ ಮತ್ತು ಪಾಪಕರ್ಮಿಗಳಾದವರು ಅಲ್ಲಾಹನಿಗೆ ಮೆಚ್ಚುಗೆಯವರಲ್ಲ. ಇವರು ತಮ್ಮ

ಚಟುವಟಿಕೆಗಳನ್ನು ಮಾನವರಿಗೆ ತಿಳಿಯದಂತೆ ಅಡಗಿಸಿಬಿಡಬಲ್ಲರು. ಆದರೆ ಅಲ್ಲಾಹನಿಗೆ ತಿಳಿಯದಂತೆ ಅಡಗಿಸಲಾರರು. ಇವರು ರಾತ್ರಿಕಾಲದಲ್ಲಿ ಅವಿತುಕೊಂಡು ಅವನ ಇಚ್ಛೆಗೆ ವಿರುದ್ಧ ಗೂಢಾಲೋಚನೆ ನಡೆಸುತ್ತಿರುವಾಗಲೂ ಆತನು ಇವರ ಸಂಗಡವೇ ಇರುತ್ತಾನೆ. ಇವರ ಸಕಲ ಕರ್ಮಗಳನ್ನು ಅಲ್ಲಾಹನು ಆವರಿಸಿಕೊಂಡಿರುತ್ತಾನೆ. ನಿಜ; ನೀವು ಈ ಅಪರಾಧಿಗಳ ಪರವಾಗಿ ಇಹ ಜೀವನದಲ್ಲಂತು ವಾದ ಮಾಡಿದಿರಿ. ಆದರೆ ಪುನರುತ್ಥಾನ ದಿನದಂದು ಇವರಿಗಾಗಿ ಅಲ್ಲಾಹನೊಂದಿಗೆ ವಾದಿಸುವವರು ಯಾರಿದ್ದಾರೆ? ಅಲ್ಲಿ ಇವರ ವಕಾಲತು ವಹಿಸುವವರು ಯಾರು?" (ಪವಿತ್ರ ಕುರ್‌ಆನ್, 4:105-109)

ಉಮರ್ ಫಾರೂಕ್‌ರ ಆಡಳಿತ ಕಾಲದಲ್ಲಿ ಅವರ ಈಜಿಪ್ಟ್‌ನ ರಾಜ್ಯಪಾಲರಾಗಿದ್ದ ಅಮ್ರ್ ಬಿನ್ ಆಸ್‌ರ ಪುತ್ರ ಮುಹಮ್ಮದ್ ಮತ್ತು ಕೋಪ್ಟ್ ವಂಶದ ಓರ್ವ ಕ್ರೈಸ್ತ, ಓಟದ ಸ್ಪರ್ಧೆ ನಡೆಸಿದರು. ಅದರಲ್ಲಿ ಮುಹಮ್ಮದ್ ಸೋತರು. ಪ್ರತೀಕಾರಕ್ಕಾಗಿ ಅವರು ತನ್ನ ಕ್ರೈಸ್ತ ಸಹೋದರನಿಗೆ ಚಾಟಿಯಿಂದ ಹೊಡೆದರು. ಆತನು, ತಂದೆಯು ಪುತ್ರನ ವಿರುದ್ಧ ಕ್ರಮ ಕೈಗೊಳ್ಳಲಾರರೆಂದು ಭಾವಿಸಿ ರಾಜ್ಯಪಾಲರಿಗೆ ತಿಳಿಸದೆ ನೇರವಾಗಿ ಖಲೀಫರಿಗೆ ದೂರು ನೀಡಿದನು. ಆ ಕೂಡಲೇ ಉಮರ್‌ರು(ರ) ಫಿರ್ಯಾದಿದಾರನನ್ನೂ ರಾಜ್ಯಪಾಲ ಅಮ್ರ್ ಮತ್ತು ಅವರ ಪುತ್ರ ಮುಹಮ್ಮದ್‌ನನ್ನೂ ಕರೆಸಿ ವಿಚಾರಣೆ ನಡೆಸಿದರು. ಘಟನೆಯು ನಿಜವೆಂದು ಮನಗಂಡ ಬಳಿಕ ಕೋಪ್ಟ್ ವಂಶದ ಕ್ರೈಸ್ತ ಸಹೋದರನಿಗೆ ಚಾಟಿ ನೀಡಿ ಮುಹಮ್ಮದ್‌ನಿಗೆ ಹೊಡೆಯುವಂತೆ ಆದೇಶಿಸಿದರು. ಹಾಗೆಯೇ ಆತ ತನಗೆ ಹೊಡೆದುದಕ್ಕೆ ಪ್ರತಿಯಾಗಿ ಮುಹಮ್ಮದ್‌ನಿಗೆ ಹೊಡೆದನು. ಪುನಃ ಉಮರ್ ಫಾರೂಕ್ ಹೇಳಿದರು: "ಇನ್ನು ಅಮ್ರ್‌ರ ತಲೆಗೂ ಹೊಡೆಯಿರಿ. ಅಲ್ಲಾಹನಾಣೆ! ಕೇವಲ ಅವರ ಅಧಿಕಾರ ಬಲ ದಿಂದಾಗಿಯೇ ಮುಹಮ್ಮದ್ ನಿಮಗೆ ಹೊಡೆದಿದ್ದಾನೆ."

"ಸತ್ಯವಿಶ್ವಾಸಿಗಳ ನಾಯಕರೇ! ನನಗಿಷ್ಟೇ ಸಾಕು. ನನಗೆ ಹೊಡೆದವನೊಂದಿಗೆ ನಾನು ಪ್ರತೀಕಾರ ತೀರಿಸಿದ್ದೇನೆ." ಕ್ರೈಸ್ತ ಬಾಂಧವ ಸಂತೃಪ್ತಿಯಿಂದ ಹೇಳಿದ.

ತರುವಾಯ ಅವನು ಅಲ್ಲಿಂದ ಹೊರಟಾಗ, ಉಮರ್ ಫಾರೂಕ್(ರ) ಅಮ್ರ್‌ರನ್ನು ನೋಡಿ ಗಂಭೀರ ಸ್ವರದಲ್ಲಿ ಹೀಗೆ ಪ್ರಶ್ನಿಸಿದರು: "ನೀವು ಜನರನ್ನು ಗುಲಾಮರಾಗಿಸಲು ಆರಂಭಿಸಿದ್ದು ಯಾವಾಗ? ಅವರ ತಾಯಂದಿರು ಅವರನ್ನು ಸ್ವತಂತ್ರವಾಗಿ ಹೆತ್ತಿದ್ದಾರೆ."

ಮತ್ತೊಮ್ಮೆ ಅಮ್ರ್ ಬಿನ್ ಆಸ್‌ರು ಓರ್ವ ಕ್ರೈಸ್ತ ಮಹಿಳೆಯ ಮನೆಯನ್ನು ಬಲಾತ್ಕಾರ ದಿಂದ ಮಸೀದಿಗೆ ಸೇರಿಸಿದರು. ಆ ಕುರಿತು ಮಹಿಳೆಯು ಖಲೀಫರಿಗೆ ದೂರು ನೀಡಿದಳು. ದೂರು ದೊರೆತ ತಕ್ಷಣವೇ ಉಮರ್ ಫಾರೂಕ್‌ರು ರಾಜ್ಯಪಾಲರನ್ನು ಕರೆಸಿ ವಿಚಾರಣೆ ನಡೆಸಿದರು. ಪ್ರಕರಣವನ್ನು ನಿಜವೆಂದು ಒಪ್ಪಿಕೊಂಡ ರಾಜ್ಯಪಾಲರು ಅದಕ್ಕೆ ಪ್ರೇರಕವಾದ ಹಿನ್ನೆಲೆಯನ್ನು ವಿವರಿಸಿದರು- ಮುಸ್ಲಿಮರ ಜನಸಂಖ್ಯೆ ಬಹಳಷ್ಟು ಹೆಚ್ಚಿತು.

ಮಸೀದಿಯಲ್ಲಿ ಸ್ಥಳಾವಕಾಶ ಕಡಿಮೆಯಾಗಿ ತೊಂದರೆಯಾಯಿತು. ಮಸೀದಿಯನ್ನು ವಿಶಾಲಗೊಳಿಸಲು ತೀರ್ಮಾನಿಸಿದಾಗ ಸಮೀಪದಲ್ಲಿ ಆ ಮಹಿಳೆಯ ಮನೆಯಿತ್ತು. ಅದಕ್ಕೆ ನ್ಯಾಯೋಚಿತ ಬೆಲೆ ನೀಡುವೆವೆಂದು ತಿಳಿಸಿದರೂ ಆಕೆ ಮಾರಲು ಒಪ್ಪಲಿಲ್ಲ. ಆದ್ದರಿಂದ ಮನೆಕೆಡಹಿ ಮಸೀದಿಗೆ ಸೇರಿಸಬೇಕಾಯಿತು. ಅದರ ಬೆಲೆಯನ್ನು ಆಕೆ ಬಯಸಿದ ಕೂಡಲೇ ಪಡೆಯಲಿಕ್ಕಾಗಿ ಸಾರ್ವಜನಿಕ ಖಜಾನೆಯಲ್ಲಿರಿಸಿದ್ದೇನೆ." ಸಾಮಾನ್ಯವಾಗಿ ಇದು ಇಂದಿನ ಕಾಲದಲ್ಲಿಯೂ ಎಲ್ಲೆಡೆ ರೂಢಿಯಲ್ಲಿರುವ ಕ್ರಮವಾಗಿದೆ. ಆದರೆ ಉಮರ್ ಫಾರೂಕ್‌ರ ಧೋರಣೆ ಇದಕ್ಕೆ ವ್ಯತಿರಿಕ್ತವಾಗಿತ್ತು. ಅವರು ಅಮ್ರ್‌ರ ವಿವರಣೆಯನ್ನು ಸಂಪೂರ್ಣ ಆಲಿಸಿದ ಬಳಿಕ, ಮಸೀದಿಯ ಆ ಭಾಗವನ್ನು ಕೆಡಹಿ ಕ್ರೈಸ್ತ ಮಹಿಳೆಯ ಮನೆಯನ್ನು ಯಥಾಸ್ಥಾನದಲ್ಲಿ ಕಟ್ಟಿಸಿಕೊಡುವಂತೆ ಆದೇಶಿಸಿದರು.

ಹಿಂಸ್‌ನ ರಾಜ್ಯಪಾಲರಾಗಿದ್ದ ಉಮೈರ್ ಬಿನ್ ಸಅದ್ ಒಮ್ಮೆ ಓರ್ವ ಮುಸ್ಲಿಮ್ ಪ್ರಜೆಯೊಡನೆ ಮಾತಾಡುತ್ತಾ, "ಅಲ್ಲಾಹನು ನಿನ್ನನ್ನು ಹೀನನಾಗಿಸಿದ್ದಾನೆ" ಎಂದು ಹೇಳಿದರು. ತರುವಾಯ ಅವರಿಗೆ ತನ್ನ ಮಾತು ಸ್ವಲ್ಪ ಅತಿಯಾಯಿತೆಂದು ತೋಚಿತು. ಅದಕ್ಕಾಗಿ ಮನಃಪೂರ್ವಕ ಪಶ್ಚಾತ್ತಾಪಪಟ್ಟು ಪ್ರಾಯಶ್ಚಿತ್ತ ಮಾಡಲು ನಿರ್ಧರಿಸಿದರು. ಹಾಗೆಯೇ ಅವರು ಖಲೀಫ ಉಮರ್ ಫಾರೂಕ್‌ರ ಬಳಿ ಹೋಗಿ ವಿಷಯ ತಿಳಿಸಿದರು. ಉನ್ನತ ಹುದ್ದೆಯಲ್ಲಿರುವುದರಿಂದ ನಾನು ಹಾಗೆ ಹೇಳಿದೆ. ಆದ್ದರಿಂದ ರಾಜ್ಯಪಾಲ ಹುದ್ದೆಗೆ ತಾನು ರಾಜೀನಾಮೆ ನೀಡುವುದಾಗಿ ಅವರು ತಿಳಿಸಿದರು. ಹಾಗೆಯೇ ಆ ಕಾಲದ ಪ್ರಾಮಾಣಿಕ ಮತ್ತು ನ್ಯಾಯನಿಷ್ಠರೆಂದು ಖ್ಯಾತರಾಗಿದ್ದ ಉಮೈರ್ ರಾಜ್ಯಪಾಲ ಸ್ಥಾನವನ್ನು ತೊರೆದರು, ಖಲೀಫರು ಅದನ್ನು ಅಂಗೀಕರಿಸಿದರು.

ಖಲೀಫರಾಗಿದ್ದ ಹ. ಅಲೀಯವರು ತಮ್ಮ ರಾಷ್ಟ್ರದ ನ್ಯಾಯಾಲಯಕ್ಕೆ ಒಂದು ದೂರು ಸಲ್ಲಿಸಿದರು. ಆರೋಪಿಯು ಓರ್ವ ಯಹೂದಿಯಾಗಿದ್ದ "ನನ್ನ ಯುದ್ಧ ಕವಚವನ್ನು ಆತ ಕದ್ದಿದ್ದಾನೆ. ಅದು ಆತನ ಬಳಿಯಿದೆ"ಯೆಂದು ಅಲೀಯವರು(ರ) ದೂರಿನಲ್ಲಿ ಹೇಳಿದ್ದರು. ವಿಚಾರಣೆಯ ವೇಳೆ ನ್ಯಾಯಾಧೀಶ ಶುರೈಹ್, ಯಹೂದಿಯೊಡನೆ ವಿಚಾರಿಸಿದರು: "ಅಮೀರುಲ್ ಮೂಮಿನೀನ್‌ರ ದೂರಿನ ಬಗ್ಗೆ ಏನು ಹೇಳುವೆ?"

"ಈ ಯುದ್ಧ ಕವಚ ನನ್ನದು. ನಿಜವಾಗಿಯೂ ನನ್ನದೇ." ಆತ ಉತ್ತರಿಸಿದ.

"ನಿಮ್ಮ ವಾದವನ್ನು ಸಾಬೀತುಪಡಿಸಲು ಸಾಧ್ಯವಿದೆಯೇ?" ಶುರೈಹ್, ಖಲೀಫರೊಡನೆ ಕೇಳಿದರು.

"ಹೌದು. ಇದು ನನ್ನದು. ಆ ಬಗ್ಗೆ ಇಬ್ಬರು ಸಾಕ್ಷಿಗಳಿದ್ದಾರೆ."- ಖಲೀಫ ಹೇಳಿದರು.

"ಸಾಕ್ಷಿಗಳು ಯಾರು?" ನ್ಯಾಯಾಧೀಶರು ವಿಚಾರಿಸಿದರು.

"ಪುತ್ರ ಹಸನ್ ಮತ್ತು ಸೇವಕ ಕಮರ್."

"ಅವರು ನಿಮ್ಮದೇ ಜನರು. ಆದ್ದರಿಂದ ಅವರ ಸಾಕ್ಷ್ಯ ಸ್ವೀಕಾರಾರ್ಹವಲ್ಲ." ಶುರೈಹ್ ದೃಢ ಸ್ವರದಲ್ಲಿ ಹೇಳಿದರು. ಅಲೀಯವರಿಗೆ ಬೇರೆ ಸಾಕ್ಷಿಗಳಿರಲಿಲ್ಲ. ಆದ್ದರಿಂದ ನ್ಯಾಯಾಧೀಶರು, ಯಹೂದಿಯ ಪರವಾಗಿ ತೀರ್ಪು ನೀಡಿದರು. ಯುದ್ಧ ಕವಚವನ್ನು ಯಹೂದಿಗೆ ನೀಡಿದರು. ಅಂತೆಯೇ ಆತ ಅದನ್ನು ಹಿಡಿದುಕೊಂಡು ಹೊರಟ. ಅಲೀಯವರು ಆತನನ್ನೇ ನೋಡುತ್ತಾ ನಿಂತರು. ಆ ಯಹೂದಿ ಸ್ವಲ್ಪ ದೂರ ಹೋಗಿ ಕೂಡಲೇ ಮರಳಿ ಬಂದ. ನ್ಯಾಯಾಧೀಶ ಶುರೈಹ್‌ರನ್ನು ನೋಡಿ ಹೀಗೆ ಹೇಳಿದ: "ಖಂಡಿತ! ಇದು ಪ್ರವಾದಿಯವರ ಕಾನೂನೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ಅಮೀರುಲ್ ಮೂಮಿನೀನ್‌ರು ತಮ್ಮ ನ್ಯಾಯಾಧೀಶರಿಗೆ ದೂರು ನೀಡುತ್ತಾರೆ. ನಂಬಲರ್ಹ ಸಾಕ್ಷ್ಯವಿಲ್ಲವೆಂದು ಹೇಳಿ ನ್ಯಾಯಾಲಯವು ಅವರ ವಿರುದ್ಧ ತೀರ್ಪು ನೀಡುತ್ತದೆ. ಇದು ನಿಜಕ್ಕೂ ಉತ್ಕೃಷ್ಟವಾಗಿದೆ. ಆದ್ದರಿಂದ ಅಲ್ಲಾಹನಲ್ಲದೆ ಅನ್ಯ ದೇವನಿಲ್ಲ, ಮುಹಮ್ಮದ್‌ರು(ಸ) ಆತನ ಪ್ರವಾದಿಯೆಂದು ನಾನು ಸಾಕ್ಷ್ಯ ವಹಿಸುತ್ತೇನೆ."

ಇದನ್ನು ಕೇಳಿದ ಖಲೀಫರು ನಗುತ್ತಾ ಹೀಗೆಂದರು: "ನಾನು ಅದನ್ನು ನಿಮಗೆ ದಾನ ಮಾಡಿರುತ್ತೇನೆ."

ಇದು, ಇಸ್ಲಾಮಿನ ಧೋರಣೆಯು ಆಡಳಿತಗಾರನ ವಿರುದ್ಧ ಓರ್ವ ಮುಸ್ಲಿಮೇತರ ಪ್ರಜೆಯ ಪರವಾಗಿ ತೀರ್ಪು ನೀಡಬಹುದಾದಷ್ಟು ನ್ಯಾಯನಿಷ್ಠ ಮತ್ತು ಸಹಿಷ್ಣುತೆಯಿಂದ ಕೂಡಿದೆಯೆಂದು ಸ್ಪಷ್ಟಪಡಿಸುವ ಅನೇಕ ಘಟನೆಗಳಲ್ಲೊಂದಾಗಿದೆ.

ಉಮರ್ ಬಿನ್ ಅಬ್ದುಲ್ ಅಝೀಝ್‌ರ ಅನನ್ಯ ನ್ಯಾಯನಿಷ್ಠೆಯ ಬಗ್ಗೆ ಕೇಳಿ ತಿಳಿದಿದ್ದ ಸಮರ್‌ಖಂದ್ ನಿವಾಸಿಗಳು, ರಾಜ್ಯಪಾಲ ಸುಲೈಮಾನ್ ಬಿನ್ ಅಬೀ ಸಿರ್ರ್‌ರೊಡನೆ ಹೀಗೆಂದರು: "ಖುತೈಬ ನಮ್ಮನ್ನು ವಂಚಿಸಿ ನಮ್ಮ ನಾಡನ್ನು ಅನ್ಯಾಯವಾಗಿ ಸ್ವಾಧೀನಪಡಿಸಿದ್ದಾರೆ. ದೇವನು ನಾಡಿನ ಎಲ್ಲೆಡೆ ಸತ್ಯ ಮತ್ತು ನ್ಯಾಯವನ್ನು ಸಂಸ್ಥಾಪಿಸಿರುವನಲ್ಲವೇ. ಆದ್ದರಿಂದ, ಈ ಬಗ್ಗೆ ಅಮೀರುಲ್ ಮೂಮಿನೀನ್‌ರಿಗೆ ದೂರು ಸಲ್ಲಿಸಲಿಕ್ಕಾಗಿ ನಮ್ಮ ಪ್ರತಿನಿಧಿ ತಂಡಕ್ಕೆ ಅನುಮತಿ ನೀಡಬೇಕು."

ಸುಲೈಮಾನ್‌ರು ಅವರ ಮನವಿಯನ್ನು ಸ್ವೀಕರಿಸಿದರು. ಹಾಗೆಯೇ ಸಮರ್ ಖಂದ್‌ನವರ ಒಂದು ನಿಯೋಗವು ಖಲೀಫರ ಬಳಿ ಹೋಗಿ ದೂರು ನೀಡಿತು. ಎಲ್ಲ ವಿಷಯಗಳನ್ನೂ ಚೆನ್ನಾಗಿ ಆಲಿಸಿದ ಬಳಿಕ ಉಮರ್ ಬಿನ್ ಅಬ್ದುಲ್ ಅಝೀಝ್‌ರು ರಾಜ್ಯಪಾಲರಿಗೆ ಈ ರೀತಿ ಪತ್ರ ಬರೆದರು. "ಸಮರ್‌ಖಂದ್ ನಿವಾಸಿಗಳು ನೀವು ಮಾಡಿದ ಅನ್ಯಾಯದ ಬಗ್ಗೆ ದೂರು ಸಲ್ಲಿಸಿದ್ದಾರೆ. ಖುತೈಬಾ, ಅವರನ್ನು ತಮ್ಮ ನಾಡಿನಿಂದ ಹೊರ

ಹಾಕಿರುವುದಾಗಿಯೂ ದೂರಿನಲ್ಲಿ ತಿಳಿಸಿದ್ದಾರೆ. ಆದ್ದರಿಂದ, ನನ್ನ ಈ ಪತ್ರ ತಲಪಿದ ಕೂಡಲೇ ನೀವು ಅವರಿಗಾಗಿ ಓರ್ವ ನ್ಯಾಯಾಧೀಶನನ್ನು ನೇಮಿಸಿರಿ. ಅವರು ಈ ಬಗ್ಗೆ ತನಿಖೆ ನಡೆಸಿ ತೀರ್ಪು ಇವರ ಪರವಾಗಿದ್ದರೆ ಮುಸ್ಲಿಮರು ತಮ್ಮ ನೆಲೆಗಳಿಗೆ ಮರಳಲಿ ಮತ್ತು ನೀವು ಖುತೈಬಾರ ಪ್ರದೇಶಕ್ಕಿಂತ ಮೊದಲಿನ ಸ್ಥಳಕ್ಕೆ ಸಾಗಿರಿ."

ಪತ್ರ ತಲಪಿದ ಕೂಡಲೇ ಸುಲೈಮಾನ್, ಜಮೀಉಬಿನ್ ಹಾಝಿರುಲ್ ಬಾಜಿಯವರನ್ನು ನ್ಯಾಯಾಧೀಶರಾಗಿ ನೇಮಿಸಿದರು. ಅವರು ದೂರುಗಳನ್ನು ಪರಿಶೀಲಿಸಿ ಅದರಲ್ಲಿ ಸತ್ಯಾಂಶವಿದೆಯೆಂದು ಮನಗಂಡ ಬಳಿಕ ಮುಸ್ಲಿಮರ ವಿರುದ್ಧ ತೀರ್ಪು ನೀಡಿದರು. ಅವರು ಸಮರ್‌ಖಂದ್ ತೊರೆದು ನಗರದ ಗಡಿಯಲ್ಲಿರುವ ಗೋಡೆಯ ಹೊರಗಿನ ತಮ್ಮ ನೆಲೆಗಳಿಗೆ ಮರಳಬೇಕೆಂದು ಆಜ್ಞಾಪಿಸಿದರು. (ತ್ವಬ್ರಿ ಭಾಗ: 6, ಪುಟ: 567–568) ಇದು ಸಮರ್‌ಖಂದ್ ನಿವಾಸಿಗಳನ್ನು ಅಕ್ಷರಶಃ ದಿಗಿಲುಗೊಳಿಸಿತು. ಓರ್ವ ಮುಸ್ಲಿಮ್ ನ್ಯಾಯಾಧೀಶನು, ತನ್ನ ಧರ್ಮ ಮತ್ತು ಸಮುದಾಯದ ವಿರುದ್ಧ ನಮ್ಮ ಪರವಾಗಿ ತೀರ್ಪು ನೀಡುವುದೇ? ಇತಿಹಾಸದಲ್ಲಿ ಸಾಟಿಯಿಲ್ಲದ ಇಂತಹ ನ್ಯಾಯದ ಬಗ್ಗೆ ಅವರಿಗೆ ಊಹಿಸಲೂ ಸಾಧ್ಯವಿರಲಿಲ್ಲ. ಆದ್ದರಿಂದ ತಮ್ಮ ಸೇನೆ ಮತ್ತು ಸೇನಾನಾಯಕನ ವಿರುದ್ಧ ತೀರ್ಪು ನೀಡಿರುವುದನ್ನು ಕಣ್ಣಾರೆ ನೋಡಿದ ಸಮರ್‌ಖಂದ್ ನಿವಾಸಿಗಳಿಗೆ, ನ್ಯಾಯ ನಿಷ್ಠ ಮತ್ತು ಸಹಿಷ್ಣುಗಳಾದ ಮುಸ್ಲಿಮರು ಅಲ್ಲಿಂದ ಹೋಗುವುದು ಇಷ್ಟವಿರಲಿಲ್ಲ. ಅವರ ಪ್ರೀತಿ ತುಂಬಿದ ವಿನಂತಿಯನ್ನು ಮನ್ನಿಸಿ ಇಸ್ಲಾಮೀ ಸೇನೆಯು ಸಮರ್‌ಖಂದ್‌ನಲ್ಲಿಯೇ ಬಿಡಾರ ಹೂಡಿತು. ಈ ಘಟನೆಗೆ ಜಾಗತಿಕ ಇತಿಹಾಸದಲ್ಲಿ ಬೇರೆ ಉದಾಹರಣೆ ದೊರೆಯಲಾರದು. ಸೇನೆಯು ಒಂದು ನಗರವನ್ನು ಗೆದ್ದು ಅಲ್ಲಿ ತಂಗುತ್ತದೆ. ಆಗ ಸೋತವರು ಗೆದ್ದವರ ಸರಕಾರಕ್ಕೆ ದೂರು ನೀಡುತ್ತಾರೆ. ಹಾಗೆಯೇ ಅಲ್ಲಿಯ ನ್ಯಾಯಾಧೀಶರು ಜಯಗಳಿಸಿದ ತಮ್ಮ ಸೇನೆಯ ವಿರುದ್ಧವಾಗಿ ತೀರ್ಪು ನೀಡಿ ಕೂಡಲೇ ಅಲ್ಲಿಂದ ಹಿಂತೆರಳುವಂತೆ ಆದೇಶಿಸುತ್ತಾರೆ. ಇದರಿಂದ ಕಳವಳಗೊಂಡ ಸ್ಥಳೀಯ ನಿವಾಸಿಗಳು ವಿಜೇತ ಸೇನೆಯು ಅಲ್ಲಿಂದ ಹೋಗಬಾರದೆಂದು ಒತ್ತಾಯಿಸುತ್ತಾರೆ. ಆಧುನಿಕ ಅಥವಾ ಪ್ರಾಚೀನ ಜನಾಂಗಗಳಲ್ಲಿ ಇದಕ್ಕೆ ಸಮನಾದ ಇನ್ನೊಂದು ಘಟನೆಯನ್ನು ಬೆಟ್ಟು ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಇಸ್ಲಾಮೀ ಸಮಾಜವು ಸತ್ಯ ಮತ್ತು ನ್ಯಾಯದ ಮೌಲ್ಯಗಳಿಂದ ಹೀಗೆ ಬಂಧಿತರಾಗಿರುವಂತೆ, ಸ್ವಂತ ಅನುಯಾಯಿಗಳನ್ನು ಇಂತಹ ತತ್ವಗಳನ್ನು ನಿಷ್ಠೆಯಿಂದ ಪಾಲಿಸುವಂತೆ ಒತ್ತಾಯಿಸುವ ಬೇರೆ ಧರ್ಮ ಅಥವಾ ಸಿದ್ಧಾಂತ ಜಗತ್ತಿನಲ್ಲಿಲ್ಲ.

ಲೆಬನಾನಿನ ಕೆಲವು ಮುಸ್ಲಿಮೇತರ ಪ್ರಜೆಗಳು ತಮ್ಮ ರಾಜ್ಯಪಾಲ ಅಲಿ ಬಿನ್ ಅಬ್ದುಲ್ಲಾ ಬಿನ್ ಅಬ್ಬಾಸ್‌ರ ವಿರುದ್ಧ ದಂಗೆಯೆದ್ದರು. ರಾಜ್ಯಪಾಲರು ಅವರ ವಿರುದ್ಧ ಕ್ರಮ ಕೈಗೊಂಡು ಅವರ ಪ್ರಯತ್ನವನ್ನು ವಿಫಲಗೊಳಿಸಿದರು. ತರುವಾಯ ದೇಶದ ಭದ್ರತೆಯ

ದೃಷ್ಟಿಯಿಂದ ಅವರನ್ನು ಬೇರೆಡೆಗಳಿಗೆ ಕಳುಹಿಸಿ ಪರಸ್ಪರ ದೂರವಿರುವಂತೆ ನೆಲೆಗೊಳಿಸುವುದು ಉತ್ತಮವೆಂದು ಭಾವಿಸಿದರು, ಅದಕ್ಕೆ ಅಗತ್ಯವಿರುವ ಏರ್ಪಾಡುಗಳನ್ನೂ ಮಾಡಿದರು. ಈ ಕ್ರಮವು ಸಾಮಾನ್ಯವಾಗಿ ಆಧುನಿಕ ನಾಗರಿಕ ರಾಷ್ಟ್ರಗಳ ಆಡಳಿತಗಾರರು ಕೈಗೊಳ್ಳುವ ಕ್ರಮಕ್ಕಿಂತ ಬಹಳ ಸರಳ ಶಿಕ್ಷೆಯಾಗಿದೆ. ಹಾಗಿದ್ದರೂ ಸಿರಿಯಾದ ಖ್ಯಾತ ವಿದ್ವಾಂಸ ಮತ್ತು ಚಿಂತಕ ಔಝಾಈ ಅದಕ್ಕೆ ಒಪ್ಪಲಿಲ್ಲ. ದಂಗೆಯಲ್ಲಿ ಭಾಗವಹಿಸದ ನಿರಪರಾಧಿಗಳನ್ನು ಶಿಕ್ಷೆಯಲ್ಲಿ ಸೇರಿಸುವುದು ಸರಿಯಲ್ಲ, ಆದ್ದರಿಂದ ಮುಸ್ಲಿಮೇತರ ಪ್ರಜೆಗಳೆಲ್ಲರನ್ನೂ ಸ್ಥಳಾಂತರಿಸುವುದು ನ್ಯಾಯವಲ್ಲವೆಂದು ಬಲವಾಗಿ ವಾದಿಸಿ ರಾಜ್ಯಪಾಲರನ್ನು ಉಗ್ರವಾಗಿ ಖಂಡಿಸಿದರು. ಔಝಾಈ, ರಾಜ್ಯಪಾಲರಿಗೆ ಕಳುಹಿಸಿದ ಸಂದೇಶದಲ್ಲಿ ಹೀಗೆ ಹೇಳಲಾಗಿತ್ತು: ನೀವು ಲೆಬನಾನ್‌ನಿಂದ ಅಲ್ಲಿನ ಮುಸ್ಲಿಮೇತರ ಪ್ರಜೆಗಳನ್ನು ಸ್ಥಳಾಂತರಿಸಿದ್ದು ತಿಳಿಯಿತು. ಆ ಪೈಕಿ ಕೆಲವರು ದಂಗೆಯಲ್ಲಿ ಶಾಮೀಲಾಗಿದ್ದರು. ಆದರೆ, ಕೇವಲ ಒಂದು ತಂಡದ ತಪ್ಪಿಗಾಗಿ ನೀವು ಎಲ್ಲರನ್ನೂ ಶಿಕ್ಷಿಸಿದ್ದೇಕೆ? ಅವರನ್ನು ತಮ್ಮ ಆಸ್ತಿಪಾಸ್ತಿಗಳಿಂದ ದೂರ ಕಳುಹಿಸಿದ್ದೇಕೆ? ಯಾರೂ ಅನ್ಯರ ಪಾಪಭಾರವನ್ನು ಹೊರಬೇಕಾಗಿಲ್ಲವೆಂಬುದು ದೇವ ನೀತಿಯಾಗಿದೆಯಷ್ಟೆ. ಅದು ಅತ್ಯುತ್ತಮ ಧೋರಣೆ ಮತ್ತು ಸರಿಯಾದ ನಿಲುಮೆಯಾಗಿದೆ. ಪ್ರವಾದಿಯವರ(ಸ) ಉಪದೇಶವನ್ನು ಪಾಲಿಸಬೇಕಾದುದು ನಿಮ್ಮ ಪ್ರಮುಖ ಕರ್ತವ್ಯವಾಗಿದೆ. ಅವರು ಹೀಗೆ ಹೇಳಿದ್ದರು: "ಯಾರಾದರೂ ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತರ ಪ್ರಜೆಗಳಿಗೆ ತೊಂದರೆಕೊಟ್ಟರೆ ಅಥವಾ ಅಸಾಧ್ಯವಾದುದನ್ನು ಬಲಾತ್ಕಾರವಾಗಿ ಅವರ ಮೇಲೆ ಹೇರಿದರೆ ಅಂತ್ಯ ದಿನದಲ್ಲಿ ನಾನು ಅವರ ವೈರಿಯಾಗುವೆನು."

ಇಮಾಮ್ ಔಝಾಈಯವರ ಈ ದಿಟ್ಟ ಧೋರಣೆಯಿಂದಾಗಿ, ತಾನು ಗಡಿಪಾರು ಮಾಡಿದ್ದ ಜನರನ್ನು ಗೌರವದಿಂದ ಮರಳಿ ಕರೆಸಲು ರಾಜ್ಯಪಾಲರು ನಿರ್ಬಂಧಿತರಾದರು. ಹೀಗೆ ಆಡಳಿತಗಾರರು ಇಸ್ಲಾಮಿನ ಉದಾತ್ತ ಮೌಲ್ಯಗಳಿಗೆ ವಿರುದ್ಧವಾಗಿ ಎಂದಾದರೂ ಮುಸ್ಲಿಮೇತರರೊಡನೆ ಅನ್ಯಾಯವಾಗಿ ವರ್ತಿಸಿದರೆ ಧರ್ಮ ವಿದ್ವಾಂಸರು ಮಧ್ಯ ಪ್ರವೇಶಿಸಿ ನ್ಯಾಯಪಾಲನೆಯಾಗುವಂತೆ ನೋಡಿಕೊಳ್ಳುತ್ತಿದ್ದರು.

ಸಿರಿಯಾದ ತಾರ್ತಾರಿಗಳೊಂದಿಗಿನ ಯುದ್ಧದಲ್ಲಿ ಅನೇಕ ಮುಸ್ಲಿಮರು, ಕ್ರೈಸ್ತರು ಮತ್ತು ಯಹೂದಿಯರು ಕೈದಿಗಳಾದರು. ತರುವಾಯ ತಾರ್ತಾರಿ ನಾಯಕರೊಡನೆ ಶೈಖುಲ್ ಇಸ್ಲಾಮ್ ಇಬ್ನು ತೈಮಿಯ್ಯರು ಕೈದಿಗಳ ವಿಮೋಚನೆಯ ಕುರಿತು ಮಾತುಕತೆ ನಡೆಸಿದಾಗ ಮುಸ್ಲಿಮ್ ಕೈದಿಗಳ ಬಿಡುಗಡೆಗೆ ಒಪ್ಪಿದರು. ಕ್ರೈಸ್ತ ಮತ್ತು ಯಹೂದಿ ಸೈನಿಕರನ್ನು ಬಿಡುಗಡೆಗೊಳಿಸಲು ಸಾಧ್ಯವಿಲ್ಲವೆಂದೂ ತಿಳಿಸಿದರು. ಆದರೆ, ಶೈಖುಲ್ ಇಸ್ಲಾಮ್‌ರು ಅದನ್ನು ಅಂಗೀಕರಿಸಲಿಲ್ಲ. ಅವರು ಹೀಗೆಂದರು, "ಎಲ್ಲ ಕ್ರೈಸ್ತ ಮತ್ತು ಯಹೂದಿಯರನ್ನೂ ಬಿಡುಗಡೆಗೊಳಿಸಬೇಕು ಅವರೂ ಮುಸ್ಲಿಮರಂತೆಯೇ ಸಮಾನರು."

ಯುದ್ಧ ನಿರತ ಶತ್ರುಗಳೊಡನೆಯೂ ಅನ್ಯಾಯವಾಗಿ ವರ್ತಿಸಬಾರದೆಂದು ಇಸ್ಲಾಮ್ ಕಲಿಸುತ್ತದೆ. ಶಿಲುಬೆ ಸೇನೆಯ ವಶದಿಂದ ಇಸ್ಲಾಮೀ ರಾಷ್ಟ್ರಗಳನ್ನು ವಿಮೋಚನೆಗೊಳಿಸಿದ ಸುಲ್ತಾನ್ ಸಲಾಹುದ್ದೀನ್ ಅಯ್ಯೂಬಿಯವರ ಬಳಿಗೆ ಓರ್ವ ಕ್ರೈಸ್ತ ಮಹಿಳೆಯು ಬಂದು, ತನ್ನ ಮಗುವನ್ನು ಸೈನಿಕರು ಅಪಹರಿಸಿರುವರೆಂದು ದೂರು ನೀಡಿದಳು. ಮಹಿಳೆಯ ಪ್ರಲಾಪವನ್ನು ಕೇಳಿ ಅವರ ಕಣ್ಣು ತೇವಗೊಂಡಿತು. ಕೂಡಲೇ ಅವರು ತಾವು ಯುದ್ಧ ಮಾಡಿದ ಶತ್ರುಗುಂಪಿಗೆ ಸೇರಿದ ಆ ಮಹಿಳೆಯ ಮಗುವಿನ ಶೋಧಕ್ಕೆ ಬೇಕಾದ ಏರ್ಪಾಡು ಮಾಡಿದರು. ಹಾಗೆಯೇ ಬಹಳ ಕ್ಷಿಪ್ರವಾಗಿ ಮಗುವನ್ನು ಪತ್ತೆ ಹಚ್ಚಿ ತಾಯಿಗೆ ಒಪ್ಪಿಸಿದರು. ತರುವಾಯ ಆಕೆಯನ್ನು ಸುರಕ್ಷಿತವಾಗಿ ಆಕೆಯ ತಾಣಕ್ಕೆ ತಲಪಿಸಲಿಕ್ಕಾಗಿ ಅಂಗರಕ್ಷಕರನ್ನೂ ಕಳುಹಿಸಿದರು. ಹೀಗೆ ವೈರಿಗಳೊಡನೆಯೂ ನ್ಯಾಯ ಮತ್ತು ಉದಾರ ಧೋರಣೆಯನ್ನು ಪಾಲಿಸುತ್ತಿದ್ದ ಸಲಾಹುದ್ದೀನ್ ಅಯ್ಯೂಬಿಯವರ ಗುಣ ವೈಶಿಷ್ಟ್ಯಗಳಿಂದ ನಿಬ್ಬೆರಗಾದ ಪಾಶ್ಚಾತ್ಯ ಬರೆಹಗಾರರು ಅವರನ್ನು ಮುಕ್ತ ಕಂಠದಿಂದ ಶ್ಲಾಘಿಸಿದ್ದಾರೆ. ಖ್ಯಾತ ಇತಿಹಾಸಜ್ಞ ಮಿಕಾಡ್ ಹೇಳುತ್ತಾರೆ: "ಅವರು ಕೈದಿಗಳಾದ ಮಕ್ಕಳನ್ನು ತಾಯಂದಿರಿಗೂ ಪತಿಯರನ್ನು ಪತ್ನಿಯರಿಗೂ ಬಿಟ್ಟುಕೊಟ್ಟರು. ಅನೇಕ ಕ್ರೈಸ್ತರು ತಮ್ಮ ಅಮೂಲ್ಯ ವಸ್ತುಗಳನ್ನು ಬಳಸಿ ತಮ್ಮ ದುರ್ಬಲ ತಾಯಂದಿರನ್ನೂ ರೋಗಿಗಳಾದ ಮಿತ್ರರನ್ನೂ ಕರೆದೊಯ್ದರು. ಈ ದೃಶ್ಯವು ಸಲಾಹುದ್ದೀನ್‌ರನ್ನು ತಲ್ಲಣಗೊಳಿಸಿತು. ಅವರು ಸೋತ ವೈರಿಗಳಿಗೆ ಅವಶ್ಯಕ ವಸ್ತುಗಳನ್ನೂ ಸಹಾಯ ಸಹಕಾರಗಳನ್ನೂ ನೀಡಿದರು."

ಮುಸ್ಲಿಮರ ಆಡಳಿತ ಕಾಲದಲ್ಲಿ ಭಾರತದ ಹಿಂದುಗಳಿಗೆ ಮುಸ್ಲಿಮರ ವಿರುದ್ಧ ವಾಗಿಯೂ ನ್ಯಾಯ ದೊರೆಯುತ್ತಿತ್ತೆಂದು ಕ್ಯಾಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯಾದಲ್ಲಿ ಸ್ಪಷ್ಟ ಪಡಿಸಲಾಗಿದೆ. (ಸಂಪುಟ: 3, ಪುಟ: 89,90)

ಆಧುನಿಕ ಪಾಕಿಸ್ತಾನದಲ್ಲಿ ಸಂಪೂರ್ಣ ಇಸ್ಲಾಮೀ ಆಡಳಿತವಿಲ್ಲದಿದ್ದರೂ ಧಾರ್ಮಿಕ ಅಲ್ಪಸಂಖ್ಯಾತರಿಗೆ ನ್ಯಾಯ ದೊರೆಯುತ್ತಿದೆ. ಸಿಂಧ್ ಪ್ರಾಂತ್ಯದ 'ಮುಹ್ತಸಿಬ್'ರ ಬಳಿಗೆ ಒಂದು ದೂರು ಬಂತು. ಹಿಂದುಗಳು ಓರ್ವ ಮುಸ್ಲಿಮನ ಬಗ್ಗೆ ದೂರು ನೀಡಿದ್ದರು. ತಮ್ಮ ಒಂದು ಗುಡಿಯನ್ನು ಇದಿರು ಕಕ್ಷಿಯು ಅಕ್ರಮವಾಗಿ ಸ್ವಾಧೀನವಿರಿಸಿರುವರೆಂದು ದೂರಲಾಗಿತ್ತು. ಗುಡಿಗೆ ಸಂಬಂಧಿಸಿದ ಸೊತ್ತುಗಳನ್ನು ಅವರಿಗೆ ಹಸ್ತಾಂತರಿಸಿದಾಗ ಗುಡಿ ಯನ್ನೂ ಅಕ್ರಮವಾಗಿ ಸ್ವಾಧೀನಪಡಿಸಲಾಗಿತ್ತು. ಅದನ್ನು ಆತನಿಂದ ತೆರವುಗೊಳಿಸಲಿಕ್ಕಾಗಿ ಸ್ಥಾನೀಯ ಮಟ್ಟದಲ್ಲಿ ನಡೆಸಿದ ಪ್ರಯತ್ನಗಳು ವಿಫಲವಾದುದರಿಂದ ಹಿಂದುಗಳು ಮುಹ್ತಸಿಬ್ ರಾಗಿದ್ದ ನ್ಯಾಯಾಧೀಶ ಮುಹಮ್ಮದ್ ಇಕ್ಬಾಲ್‌ರಿಗೆ ದೂರು ಸಲ್ಲಿಸಿದರು. ಹಿಂದುಗಳ ವಾದವು ನಿಜವೆಂದು ಮನಗಂಡ ಮುಹ್ತಸಿಬ್ ಅವರ ಪರವಾಗಿ ತೀರ್ಪು ನೀಡಿದರು. ಇದು ಪಾಕಿಸ್ತಾನದಲ್ಲಿ ಇಸ್ಲಾಮೀ ವ್ಯವಸ್ಥೆಯು ಪೂರ್ಣರೂಪದಲ್ಲಿ ಜಾರಿಯಲ್ಲಿಲ್ಲದಿದ್ದರೂ ಧಾರ್ಮಿಕ

ಲ್ಪಸಂಖ್ಯಾತರೊಂದಿಗಿನ ಧೋರಣೆಯು ಸಂಪೂರ್ಣ ನ್ಯಾಯೋಚಿತವಾಗಿದೆ ಯೆಂದು ಬಿತುಪಡಿಸುವ ಅನೇಕ ಘಟನೆಗಳಲ್ಲೊಂದಾಗಿದೆ.

ಇಸ್ಲಾಮಿ ಆಡಳಿತ ವ್ಯವಸ್ಥೆಯು ಜಾರಿಯಲ್ಲಿದ್ದಾಗ ನ್ಯಾಯಪಾಲನೆಯು ನಿಷ್ಪಕ್ಷಪಾತ ಾಗಿದ್ದಿತು. ರಾಷ್ಟ್ರದ ಪ್ರಜೆಗಳ ಮಧ್ಯೆ ಯಾವುದೇ ರೀತಿಯ ತಾರತಮ್ಯವನ್ನೂ ತೋರಿಸು ರಲಿಲ್ಲ. ಏಕೆಂದರೆ ಇಸ್ಲಾಮ್ ಧರ್ಮ ಅದರ ಅನುಯಾಯಿಗಳಿಗೆ, ಜಾತಿ, ಧರ್ಮ, ೇಶ, ಭಾಷೆ, ವರ್ಗ, ವರ್ಣ, ಪಕ್ಷಪಾತವಿಲ್ಲದೆ ಮಾನವರ ಮಧ್ಯೆ ಕಟ್ಟುನಿಟ್ಟಿನಿಂದ ನ್ಯಾಯ ಾಲಿಸಬೇಕೆಂದು ಆಜ್ಞಾಪಿಸುತ್ತದೆ.

# ಜಿಝಿಯ

**ಜಿ**ಝಿಯಾ (ರಕ್ಷಣಾ ತೆರಿಗೆ) ಎಂಬುದು ಜಗತ್ತಿನಲ್ಲಿ ಅತ್ಯಧಿಕ ತಪ್ಪು ತಿಳಿಯಲ್ಪ
ಇಸ್ಲಾಮೀ ಪಾರಿಭಾಷಿಕ ಪದವಾಗಿದೆ. ಅದನ್ನು ಇಸ್ಲಾಮೀ ರಾಷ್ಟ್ರಗಳಲ್ಲಿ ಧಾರ್ಮಿಕ ಅ
ಸಂಖ್ಯಾತರೊಂದಿಗಿರುವ ಪಕ್ಷಪಾತ ಮತ್ತು ಅವರನ್ನು ದ್ವಿತೀಯ ದರ್ಜೆಯ ಪೌರರೆಂದ
ಪರಿಗಣಿಸುವ ಮನೋಭಾವದ ಸಂಕೇತವೆಂದೂ ಆಕ್ಷೇಪಿಸಲಾಗುತ್ತಿದೆ. ಮುಸ್ಲಿಮೇತ
ಪ್ರಜೆಗಳಿಗೆ ವಿಧಿಸಲಾಗುವ ಈ ತೆರಿಗೆಯ ಹಿನ್ನೆಲೆಯನ್ನು ಸರಿಯಾಗಿ ಗ್ರಹಿಸದಿರುವುದ
ಈ ತಪ್ಪು ತಿಳುವಳಿಕೆ ಮತ್ತು ಟೀಕೆಗಳಿಗೆ ಕಾರಣವಾಗಿದೆ.

ಇಸ್ಲಾಮೀ ರಾಷ್ಟ್ರವು ಮುಸ್ಲಿಮೇತರ ಪೌರರಿಗೆ ಈ ಕಂದಾಯವನ್ನು ವಿಧಿಸುವುದ
ಎರಡು ಪ್ರಮುಖ ಕಾರಣಗಳಿವೆ.

1. ಮುಸ್ಲಿಮರು ತಮ್ಮ ಕೃಷಿ ಆದಾಯಗಳ 10% ಮತ್ತು ಇತರ ಆದಾಯಗ
2.5% ಝಕಾತಿನ ಬಾಬ್ತಿನಲ್ಲಿ ಸಾರ್ವಜನಿಕ ಬೊಕ್ಕಸಕ್ಕೆ (ಬೈತುಲ್ ಮಾಲ್) ಕಡ್ಡಾಯವಾ
ನೀಡಬೇಕು. ಇದು ಕೇವಲ ಆರ್ಥಿಕ ಹೊಣೆ ಮಾತ್ರವಲ್ಲ, ಧಾರ್ಮಿಕ ಆರಾಧನಾ ಕರ್ಮವೂ
ಆಗಿದೆ. ಆದ್ದರಿಂದ ಅದನ್ನು ಮುಸ್ಲಿಮೇತರರಿಗೆ ಕಡ್ಡಾಯಗೊಳಿಸಲು ಸಾಧ್ಯವಿಲ್ಲ, ಏಕೆಂದ
ಅದರಿಂದ ಅವರ ಧಾರ್ಮಿಕ ಸ್ವಾತಂತ್ರ್ಯವನ್ನು ನಿಷೇಧಿಸಿದಂತಾಗುವುದು. ಈ ಹಿನ್ನೆಲೆಯ
ಸಮಾಜದ ಆರ್ಥಿಕ ಸಂತುಲನೆಗಾಗಿ ಮುಸ್ಲಿಮೇತರ ಪೌರರಿಗೆ ಇಸ್ಲಾಮೀ ಧಾರ್ಮಿ
ಆಚಾರಗಳಿಗೆ ಸಂಬಂಧವಿಲ್ಲದ ಬೇರೊಂದು ತೆರಿಗೆಯನ್ನು ವಿಧಿಸಲಾಯಿತು. ಅದ
ಜಿಝಿಯಾ. ವಸ್ತುತಃ ಅದು ಮುಸ್ಲಿಮರಿಂದ ರಾಷ್ಟ್ರವು ಕಡ್ಡಾಯವಾಗಿ ವಸೂಲು ಮಾಡು
ಝಕಾತಿಗೆ ಪರ್ಯಾಯವಾಗಿರುವ ತೆರಿಗೆಯಾಗಿದೆ.

ಸ್ಥಿತಿವಂತ ಮುಸ್ಲಿಮರೆಲ್ಲರೂ ಝಕಾತ್ ನೀಡುವುದು ಕಡ್ಡಾಯವಾಗಿದೆ. ಮಹಿಳೆಯರು
ಮಕ್ಕಳು, ವೃದ್ಧರು, ರೋಗಿಗಳೇ ಮುಂತಾದ ಯಾರೂ ಅದರಿಂದ ಮುಕ್ತರಲ್ಲ. ಆದ
ಅದಕ್ಕೆ ಹೋಲಿಸಿದಾಗ 'ಜಿಝಿಯಾ'ದಲ್ಲಿ ಅನೇಕ ವಿನಾಯಿತಿ ಮತ್ತು ಸೌಲಭ್ಯಗಳಿ
ಮಹಿಳೆಯರು, ಮಕ್ಕಳು, ಕುರುಡರು, ಮುದುಕರು, ಮಾರಕ ರೋಗಿಗಳು, ಹುಚ್ಚರು

ಂಠದ ಸನ್ಯಾಸಿಯರು, ಪುರೋಹಿತರು ಮುಂತಾದವರಿಂದ ಜಿಝಿಯಾ ವಸೂಲು
ಾಡಲಾಗುವುದಿಲ್ಲ. ಆದ್ದರಿಂದ ಜಿಝಿಯಾ ಮುಸ್ಲಿಮೇತರರೊಂದಿಗಿನ ಪಕ್ಷಪಾತವಲ್ಲ,
ವಲಾಗಿ ಅವರಿಗೆ ಆರ್ಥಿಕವಾಗಿ ವಿನಾಯಿತಿ ದೊರೆಯುವ ಉಪಾಧಿಯಾಗಿದೆ.

ಒಮ್ಮೆ ಪ್ರವಾದಿಯವರ ದ್ವಿತೀಯ ಉತ್ತರಾಧಿಕಾರಿ ಉಮರ್ ಫಾರೂಕ್‌ರು ಬೀದಿ
ಲ್ಲಿ ಹೋಗುತ್ತಿದ್ದರು. ಆಗ ಓರ್ವ ಕುರುಡ ಮತ್ತು ದುರ್ಬಲರಾಗಿದ್ದ ಓರ್ವ ಮುದುಕರನ್ನು
ಟಿಯಾದರು. ಉಮರ್‌ರು ಅವರ ಭುಜದ ಮೇಲೆ ಕೈಯಿರಿಸಿ 'ನೀವು ಯಾರು?' ಎಂದು
ಚಾರಿಸಿದರು. 'ನಾನೋರ್ವ ಯಹೂದಿ' ಎಂದು ಹೇಳಿದಾಗ ಅವರು ಪುನಃ 'ನಿಮ್ಮ ಈ
ಗೆ ಕಾರಣವೇನು?' ಎಂದು ಪ್ರಶ್ನಿಸಿದರು.

"ವೃದ್ಧ ಮತ್ತು ದುರ್ಬಲನಾದ ನಾನು ಜಿಝಿಯಾ ನೀಡಬೇಕಾಗಿದೆ." ಯಹೂದಿ
ಳಿದರು. ಕೂಡಲೇ ಉಮರ್‌ರು ಆತನನ್ನು ತಮ್ಮ ವಾಸಸ್ಥಳಕ್ಕೆ ಕರೆದೊಯ್ದು ಸ್ವಲ್ಪ ಹಣ
ಡಿದರು. ಅನಂತರ ಆ ಕೂಡಲೇ ಕೋಶಾಧಿಕಾರಿಗಳಿಗೆ ಆ ವೃದ್ಧರ ಮೂಲಕ ಒಂದು
ದೇಶ ಕಳುಹಿಸಿದರು. ಅದರಲ್ಲಿ ಹೀಗೆ ಆದೇಶಿಸಲಾಗಿತ್ತು: "ಇವರನ್ನೂ ಇವರಂಥ
ರರನ್ನೂ ಗುರುತಿಸಿರಿ. ಅಲ್ಲಾಹನಾಣೆ! ಅವರ ಯೌವನವನ್ನು ನಾವು ಬಳಸಿ ವಾರ್ಧಕ್ಯ
ಲ್ಲಿ ಅವರನ್ನು ಬೀದಿ ಪಾಲುಗೊಳಿಸುವುದು ಸರ್ವಥಾ ನ್ಯಾಯವಲ್ಲ. ಝಕಾತ್‌ನ
ಾಯವು ಬಡವರು (ಫುಕರಾಅ್) ಮತ್ತು ದರಿದ್ರ(ಮಸಾಕೀನ್)ರ ಹಕ್ಕಾಗಿದೆ. ಫುಕರಾಅ್
ಂದರೆ ಮುಸ್ಲಿಮರಲ್ಲಿರುವ ಬಡವರು. ಇವರು ಗ್ರಂಥದವರಾಗಿರುವುದರಿಂದ ಮಸಾಕೀನ್
ಲ್ಲಿ ಸೇರುತ್ತಾರೆ. ತರುವಾಯ ಉಮರ್‌ರು ಆ ವೃದ್ಧನನ್ನು ಜಿಝಿಯಾದ ಹೊರೆಯಿಂದ
ುಕ್ತಗೊಳಿಸಿದರು.' **(ಅಬೂ ಯೂಸುಫ್: ಕಿತಾಬುಲ್ ಖರಾಜ್, ಪುಟ: 126 ನೋಡಿರಿ.)**

'ಜಿಝಿಯಾ' ಝಕಾತ್‌ಗೆ ಪರ್ಯಾಯವಾಗಿರುವುದರಿಂದ ಯಾರಾದರೂ ಮುಸ್ಲಿಮ
ತರೆಯೇ ಝಕಾತ್ ನೀಡಲು ಸ್ವಯಂ ಸನ್ನದ್ಧರಾದರೆ ಅವರನ್ನು ಇಸ್ಲಾಮೀ ರಾಷ್ಟ್ರವು
ಝಿಯಾ'ದಿಂದ ಮುಕ್ತಗೊಳಿಸುತ್ತದೆ. ಚರಿತ್ರೆಯಲ್ಲಿ ಅಂಥ ಅನೇಕ ಉದಾಹರಣೆಗಳಿವೆ.
ಲ್ಲಿ ಒಂದು ಉದಾಹರಣೆಯನ್ನು ತಿಳಿಸುತ್ತೇನೆ. ಸರ್ ಥಾಮಸ್ ಆರ್ನಾಲ್ಡ್ ಬರೆದಿದ್ದಾರೆ:
ಅವರೊಡನೆ (ತಗ್ಲಿಬ್ ಗೋತ್ರ) ಮುಸ್ಲಿಮೇತರ ಗೋತ್ರಗಳಿಗೆ ಒದಗಿಸುವ ಭದ್ರತೆಗೆ
ಯಾಗಿ ವಿಧಿಸುವ ತೆರಿಗೆ- ಜಿಝಿಯ- ಪಾವತಿಸುವಂತೆ ಅವರು (ಉಮರ್) ತಿಳಿಸಿದರು.
ರೆ, ಜಿಝಿಯಾ ಪಾವತಿಸುವುದನ್ನು ಅಪಮಾನವೆಂದು ಭಾವಿಸಿದ ತಗ್ಲಿಬ್ ಗೋತ್ರವು
ಗೆ ಮುಸ್ಲಿಮರಂತೆಯೇ ತೆರಿಗೆ (ಝಕಾತ್) ನೀಡಲು ಅನುಮತಿಸಬೇಕೆಂದು
ಂತಿಸಿದರು. ಖಲೀಫರು ಅದಕ್ಕೆ ಅನುಮತಿ ನೀಡಿ ಅವರು ಮುಸ್ಲಿಮರಂತೆಯೇ
ಝಯಾದ ಇಮ್ಮಡಿ ಮೊತ್ತವನ್ನು ಬೊಕ್ಕಸಕ್ಕೆ ಪಾವತಿಸಿದರು."

**(ಥೋಮಸ್ ಆರ್ನಾಳ್ಡ್: ಇಸ್ಲಾಮ್ ಪ್ರಚಾರ ಮತ್ತು ಪ್ರಸಾರ, ಪುಟ: 62)**

ಜಿಝಿಯಾವನ್ನು ಯಾವ ಕಾರಣಕ್ಕೂ ಹೆಚ್ಚಿಸಬಾರದೆಂದು ಪ್ರವಾದಿಯವ ಆದೇಶಿಸಿದ್ದರು. ಅವರು ಹೀಗೆ ಹೇಳಿದ್ದಾರೆ: "ಒಪ್ಪಂದಕ್ಕೆ ಬದ್ಧನಾಗಿರುವವನನ್ನು (ದಿ ಪೀಡಿಸುವ ಅಥವಾ ಅಮಿತ ತೆರಿಗೆ ವಿದಿಸುವವರ ವಿರುದ್ಧ ಅಂತ್ಯದಿನದಲ್ಲಿ ನಾ ವಾದಿಸುತ್ತೇನೆ." **(ಅಬೂ ಯೂಸುಫ್: ಕಿತಾಬುಲ್ ಖಿರಾಜ್, ಪುಟ: 7**

2. ಇಸ್ಲಾಮೀ ರಾಷ್ಟ್ರವು ಅಪೇಕ್ಷಿಸಿದಾಗ ಮುಸ್ಲಿಮ್ ಪೌರನು ಸೇನೆಗೆ ಸೇರುವು ಕಡ್ಡಾಯವಾಗಿದೆ. ಇದು ಅವರ ಧಾರ್ಮಿಕ ಹೊಣೆಯೂ ಆಗಿದೆ. ಒಂದು ಮೌಲ್ಯಾಧಾ ರಾಷ್ಟ್ರದ ಸಂರಕ್ಷಣೆಗಾಗಿ ಆ ಮೌಲ್ಯವನ್ನು ಅಂಗೀಕರಿಸಿದವರನ್ನು ನಿರ್ಬಂಧಿಸುವು ತರವಲ್ಲ. ಆದ್ದರಿಂದ, ಇಸ್ಲಾಮೀ ರಾಷ್ಟ್ರವು ಮುಸ್ಲಿಮೇತರ ಪೌರರನ್ನು ಸೈನಿಕ ಸೇವೆಗ ಒತ್ತಾಯಿಸು ವುದಿಲ್ಲ. ಅದೇ ವೇಳೆ ಅವರು ಸ್ವತಃ ಅಪೇಕ್ಷಿಸಿದರೆ ಸೇನೆಯಲ್ಲಿ ಅವಕ ನೀಡಲಾಗುತ್ತದೆ.

ಇಸ್ಲಾಮೀ ರಾಷ್ಟ್ರಕ್ಕೆ ಅದರ ಎಲ್ಲ ಪೌರರಿಗೂ ಭದ್ರತೆ ಒದಗಿಸುವ ಹೊಣೆಗಾ ಯಿದೆ. ಆದ್ದರಿಂದ ಮುಸ್ಲಿಮರು ತಮ್ಮ ಮಾತ್ರವಲ್ಲ, ಮುಸ್ಲಿಮೇತರ ಪ್ರಜೆಗಳ ಪ್ರಾ ಸೊತ್ತು-ವಿತ್ತ, ಮಾನಗಳ ರಕ್ಷಣೆಗಾಗಿಯೂ ಕಡ್ಡಾಯವಾಗಿ ಸೇನೆಯಲ್ಲಿ ಸೇವೆ ಸ ಬೇಕಾಗುತ್ತದೆ. ಹೀಗೆ ಭದ್ರತೆ ಒದಗಿಸಲಿಕ್ಕಾಗಿ ಮತ್ತು ಸೈನಿಕ ಸೇವೆಯಿಂದ ವಿನಾಯಿ ನೀಡಲಿಕ್ಕಾಗಿ ಮುಸ್ಲಿಮೇತರರಿಂದ ಜಿಝಿಯಾ ಸಂಗ್ರಹಿಸಲಾಗುತ್ತದೆ. ಕಾರಣವಶಾತ್ ಅವ ಭದ್ರತೆ ಒದಗಿಸಲು ಅಸಾಧ್ಯವಾದರೆ ಜಿಝಿಯಾವನ್ನು ಮರಳಿಸಲಾಗುತ್ತದೆ. ಹಾಗೆ ಅವರು ಸ್ವತಃ ಸೇನೆಯಲ್ಲಿ ಸೇರಿದರೂ ಅವರಿಗೆ ಜಿಝಿಯಾ ಮನ್ನಾ ಮಾಡಲಾಗುತ್ತ ಸರ್ ಥಾಮಸ್ ಅರ್ನಾಳ್ಡ್ ಹೀಗೆ ಬರೆದಿದ್ದಾರೆ: ಕೆಲವರು ನಮ್ಮನ್ನು ನಂಬಿಸಲು ಪ್ರಯತ್ನಿ ತ್ತಿರುವಂತೆ, ಇದು ಮುಸ್ಲಿಮ್ ವಿಶ್ವಾಸವನ್ನು ಅಂಗೀಕರಿಸಲು ನಿರಾಕರಿಸಿದ್ದಕ್ಕೆ ದಂಡನೆಯ ಕ್ರೈಸ್ತರ ಮೇಲೆ ಹೇರಿದ ತೆರಿಗೆಯಲ್ಲ. ಅದನ್ನು ಎಲ್ಲ ಮುಸ್ಲಿಮೇತರ ಪೌರರೂ ತೆರಬೇ ಧಾರ್ಮಿಕ ಕಾರಣಗಳಿಂದಾಗಿ ಅವರನ್ನು ಸೈನಿಕ ಸೇವೆಯಿಂದ ಮುಕ್ತಗೊಳಿಸಲಾಗಿ ಮುಸ್ಲಿಮರು ಒದಗಿಸಿದ ಭದ್ರತೆಗಾಗಿ ಅವರು ಜಿಝಿಯಾ ನೀಡಬೇಕಾಯಿತು. ಹೀರ ನಿವಾಸಿಗಳು ಒಪ್ಪಂದದ ಪ್ರಕಾರ ತೆರಿಗೆಯನ್ನು ಪಾವತಿಸಿದಾಗ, ಅದು ಮರ್ದಕರಿ (ಅವರು ಮುಸ್ಲಿಮರು ಅಥವಾ ಇತರರಾಗಿದ್ದರೂ) ರಕ್ಷಣೆ ಒದಗಿಸಲಿಕ್ಕಾಗಿ ವಸೂ ಮಾಡಲಾಗುತ್ತಿದೆ ಎಂದು ಮುಸ್ಲಿಮರಿಗೆ ಪ್ರತ್ಯೇಕವಾಗಿ ತಿಳಿಸಲಾಗಿತ್ತು. ಹೀರಾದ ಸಮಿ ಪ್ರದೇಶದ ಕೆಲವು ಗೋತ್ರಗಳೊಡನೆ ಒಪ್ಪಂದ ಮಾಡಿದಾಗ ಖಾಲಿದ್ ಹೀಗೆ ಸ್ಪಷ್ಟಪಡಿಸಿದ್ದ "ನಾವು ನಿಮಗೆ ರಕ್ಷಣೆ ಒದಗಿಸುವಾಗ ಜಿಝಿಯಾದಲ್ಲಿ ನಮಗೆ ಹಕ್ಕಿದೆ. ನಾವು ನಿಮ್ಮ ಸಂರಕ್ಷಿಸದಿದ್ದರೆ ನಮಗೆ ಆ ಹಕ್ಕು ಇರುವುದಿಲ್ಲ!" ಖಲೀಫ ಉಮರ್‌ರ ಕಾಲದಲ್ಲಿ ನ ಒಂದು ಘಟನೆಯಿಂದ, ಈ ರೀತಿಯ ಒಪ್ಪಂದಗಳ ಪಾಲನೆಯ ಬಗ್ಗೆ ಮುಸ್ಲಿಮ

ಎಷ್ಟೊಂದು ಕಟ್ಟೆಚ್ಚರ ವಹಿಸುತ್ತಿದ್ದರೆಂದು ವ್ಯಕ್ತವಾಗುತ್ತದೆ. ಹರ್ಕ್ಯುಲೆಸ್ ಚಕ್ರವರ್ತಿಯು ಮುನ್ನುಗ್ಗುತ್ತಿರುವ ಮುಸ್ಲಿಮ್ ಸೇನೆಯನ್ನು ಬಗ್ಗುಬಡಿಯಲಿಕ್ಕಾಗಿ ಒಂದು ದೊಡ್ಡ ಸೇನೆಯನ್ನು ಸಜ್ಜುಗೊಳಿಸಿದರು. ಆದ್ದರಿಂದ, ಮುಸ್ಲಿಮರು ತಮ್ಮೆಲ್ಲ ಶಕ್ತಿ ಸಾಮರ್ಥ್ಯಗಳನ್ನು ಅವರ ವಿರುದ್ಧ ಬಳಸಬೇಕಾಯಿತು. ಇದರಿಂದಾಗಿ ಅರಬ್ ಸೇನಾನಾಯಕ ಅಬೂ ಉಬೈದರು, ಸಿರಿಯನ್ ನಗರಗಳ ಮುಸ್ಲಿಮ್ ರಾಜ್ಯಪಾಲರುಗಳಿಗೆ, ಅವರು ಈಗಾಗಲೇ ಸಂಗ್ರಹಿಸಿರುವ ಜಿಝಿಯಾವನ್ನು ಹಿಂತಿರುಗಿಸುವಂತೆ ಆದೇಶಿಸಿ ಪತ್ರ ಬರೆದರು. ಮುಸ್ಲಿಮೇತರ ಪ್ರಜೆಗಳಿಗೆ ಹೀಗೆ ತಿಳಿಸಬೇಕೆಂದೂ ಸೂಚಿಸಿದರು: "ನಿಮ್ಮಿಂದ ಸ್ವೀಕರಿಸಿರುವ ಹಣವನ್ನು ನಿಮಗೆ ಮರಳಿಸುತ್ತಿದ್ದೇವೆ. ನಮ್ಮ ವಿರುದ್ಧ ಒಂದು ಬೃಹತ್ ಸೇನೆಯು ಆಗಮಿಸುತ್ತಿದೆಯೆಂಬ ಸುದ್ದಿಯಿದೆ. ನಿಮ್ಮನ್ನು ಸಂರಕ್ಷಿಸುವೆವೆಂದು ನಾವು ಒಪ್ಪಂದ ಮಾಡಿದ್ದೆವು." ಈಗ ಅದು ನಮ್ಮಿಂದ ಸಾಧ್ಯವಿಲ್ಲ. ಆದ್ದರಿಂದ, ನಿಮ್ಮಿಂದ ಪಡೆದುದೆಲ್ಲವನ್ನೂ ನಾವು ಹಿಂತಿರುಗಿಸುತ್ತಿದ್ದೇವೆ. ಜಯಿಸಿದರೆ ಪುನಃ ನಾವು ಒಪ್ಪಂದದಂತೆ ವರ್ತಿಸುವ ಹೊಣೆ ವಹಿಸುತ್ತೇವೆ.' ಈ ಆಜ್ಞೆಯಂತೆ ಬೊಕ್ಕಸದಿಂದ ಹೇರಳ ಹಣವನ್ನು ವಿತರಿಸಲಾಯಿತು. ಕ್ರೈಸ್ತರು, ಮುಸ್ಲಿಮರ ವಿಜಯಕ್ಕಾಗಿ ಪ್ರಾರ್ಥಿಸುತ್ತಿದ್ದರು. "ದೇವನು ಪುನಃ ನಿಮಗೆ ನಮ್ಮನ್ನು ಆಳುವ ಸಾಮರ್ಥ್ಯವನ್ನು ನೀಡಲಿ. ನೀವು ರೋಮನರನ್ನು ಸೋಲಿಸುವಂತಾಗಲಿ. ಒಂದು ವೇಳೆ ಅವರ ಆಳ್ವಿಕೆಯಿರುತ್ತಿದ್ದರೆ ಅವರು ನಮಗೆ ಏನನ್ನೂ ಹಿಂತಿರುಗಿಸುತ್ತಿರಲಿಲ್ಲ ಮಾತ್ರವಲ್ಲ ನಮ್ಮ ಬಳಿಯಲ್ಲಿರುವುದನ್ನೂ ದೋಚುತ್ತಿದ್ದರು."

ದೇಹ ಬಲವಿರುವ ಪುರುಷರಿಗೆ ಜಿಝಿಯಾ ಅನ್ವಯವಾಗುತ್ತಿತ್ತೆಂಬುದನ್ನು ನಾವು ನೋಡಿದೆವು. ಇದು ಸೈನಿಕ ಸೇವೆಗೆ ಪರ್ಯಾಯವಾಗಿತ್ತು. ಸೇನೆಯಲ್ಲಿ ಸೇರಿದ ಕ್ರೈಸ್ತರಿಗೆ ಜಿಝಿಯಾವನ್ನು ಮನ್ನಾ ಮಾಡುತ್ತಿದ್ದರು. ಅಂಟಾಕಿಯಾ ಪರಿಸರದಲ್ಲಿದ್ದ ಜುರ್ಜಿಯಾ ಗೋತ್ರವು ಜಿಝಿಯಾ ನೀಡುತ್ತಿರಲಿಲ್ಲ. ಅವರು ಮುಸ್ಲಿಮರ ಜತೆಗೂಡಿ ಯುದ್ಧ ಮಾಡುವೆವೆಂದು ಒಪ್ಪಂದ ಮಾಡಿಕೊಂಡಿದ್ದರು. ಜಿಝಿಯಾ ಕೇಳಬಾರದು ಮತ್ತು ಸಮರಾರ್ಜಿತ ಸಂಪತ್ತಿನಲ್ಲಿ ಅವರಿಗೂ ಪಾಲು ನೀಡಬೇಕೆಂದು ಒಪ್ಪಂದದಲ್ಲಿ ಸೂಚಿಸಲಾಗಿತ್ತು. ಅರಬ್ ಸೇನೆಯು ಹಿಜರಿ 22ರಲ್ಲಿ ಪರ್ಶಿಯದ ಉತ್ತರ ಭಾಗಕ್ಕೆ ತಲಪಿದಾಗ ಗಡಿಯ ಒಂದು ಗೋತ್ರದೊಡನೆ ಮುಸ್ಲಿಮರು ಹೀಗೆಯೇ ಒಪ್ಪಂದ ಮಾಡಿದ್ದರು.

'ಟರ್ಕಿ ಆಡಳಿತ ಕಾಲದಲ್ಲಿ ಸೇನೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಕ್ರೈಸ್ತರು ಜಿಝಿಯಾ ನೀಡುತ್ತಿರಲಿಲ್ಲವೆಂದು ಕಂಡು ಬರುತ್ತದೆ. ಕೋರಿಂಟ್ ಜಲಸಂಧಿಗೆ ಸಾಗುವ ಸಿಟ್ರೋನ್, ಗರಾನಿಯ ಕಣಿವೆಯನ್ನು ಕಾಯುವುದಕ್ಕೆ ಸಶಸ್ತ್ರ ತಂಡವನ್ನು ನೀಡುವೆವೆಂಬ ಶರ್ತದಲ್ಲಿ ಅಲ್ಬೇನಿಯನ್ ಕ್ರೈಸ್ತ ವರ್ಗದ ಮೆಗಾರಿಗಳನ್ನು ಟರ್ಕಿಗಳು ಜಿಝಿಯಾದಿಂದ ಮುಕ್ತ

ಗೊಳಿಸಿದ್ದರು. ಟರ್ಕಿಸೇನೆಯು ಸಾಗುವ ರಸ್ತೆ, ಸೇತುವೆಗಳನ್ನು ಸರಿಪಡಿಸುತ್ತಿದ್ದ ಕ್ರೈಸ್ತ ತಂಡಕ್ಕೆ ಜಿಝಿಯಾದಿಂದ ವಿನಾಯಿತಿ ನೀಡಲಾಗಿತ್ತು ಮಾತ್ರವಲ್ಲ, ಕಂದಾಯ ಪಡೆಯದೆ ಜಮೀನು ಹಂಚಿಕೊಡಲಾಗಿತ್ತು. ಹೈಬ್ರಾದ ಕ್ರೈಸ್ತರು ಸುಲ್ತಾನ್‌ರಿಗೆ ಜಿಝಿಯಾ ನೀಡುತ್ತಿರಲಿಲ್ಲ. ಅದರ ಬದಲಿಗೆ ಅವರು 250 ದೃಢಕಾಯ ನಾವಿಕರನ್ನು ಟರ್ಕಿ ಸೇನೆಗೆ ನೀಡಿದರು.

'ಆರ್ಮಟೋಲಿ ಎಂದು ಕರೆಯಲ್ಪಡುವ ದಕ್ಷಿಣ ರುಮಾನಿಯವರು 16-17ನೆಯ ಶತಮಾನಗಳಲ್ಲಿ ಟರ್ಕಿಸೇನೆಯ ಪ್ರಧಾನ ಅಂಗವಾಗಿದ್ದರು. ಸ್ಕೂಟಾರಿಕ್‌ನ ಉತ್ತರದ ಪರ್ವತ ಶ್ರೇಣಿಗಳಲ್ಲಿ ವಾಸವಾಗಿರುವ ಮಿರ್ದಿಯರೆಂಬ ಅಲ್ಬೇನಿಯನ್ ಕೆಥೋಲಿಕರನ್ನು ತೆರಿಗೆಯಿಂದ ಮುಕ್ತಗೊಳಿಸಲಾಗಿತ್ತು. ಅವರು ಯುದ್ಧ ವೇಳೆಯಲ್ಲಿ ಸಶಸ್ತ್ರ ತಂಡವೊಂದನ್ನು ನೀಡುವ ವಾಗ್ದಾನವಿತ್ತಿದ್ದರು. ಹಾಗೆಯೇ ಗ್ರೀಕ್ ಕ್ರೈಸ್ತರನ್ನು ಜಿಝಿಯಾದಿಂದ ಮುಕ್ತ ಗೊಳಿಸಲಾಯಿತು. ಕಾನ್ಸ್‌ಟೆಂಟಿನೋಪಲ್‌ಗೆ ಕುಡಿಯುವ ನೀರು ಸರಬರಾಜು ಮಾಡುತ್ತಿದ್ದ ಕಲ್ಲಿನ ನಾಲೆಗಳನ್ನು ಅವರು ಸಂರಕ್ಷಿಸುತ್ತಿದ್ದರು. ನಗರದ ಸಿಡಿಮದ್ದು ಸ್ಥಾವರವನ್ನು ಕಾಯುತ್ತಿದ್ದ ವರಿಗೂ ಕರ ವಿನಾಯಿತಿಯಿತ್ತು. ಆದರೆ, ಸೈನಿಕ ಸೇವೆಗಳಿಂದ ಮುಕ್ತಗೊಳಿಸಿದ್ದ ಈಜಿಪ್ಟ್‌ನ ಗ್ರಾಮೀಣ ರೈತರಿಂದ, ಕ್ರೈಸ್ತರಂತೆಯೇ ಕರವಸೂಲು ಮಾಡಲಾಯಿತು.'

**(ಥೋಮಸ್ ಅರ್ನಾಳ್ಡ್: ಇಸ್ಲಾಮ್ ಪ್ರಚಾರ ಮತ್ತು ಪ್ರಸಾರ, ಪುಟ: 73-76)**

"ಪ್ರವಾದಿಯವರ(ಸ) ಕಾಲದಲ್ಲಿ ಮದೀನದ ಮುಸ್ಲಿಮೇತರ ವಿಭಾಗಗಳು ರಾಷ್ಟ್ರದ ರಕ್ಷಣಾ ಸೇವೆಯಲ್ಲಿ ಭಾಗಿಯಾಗಿದ್ದುದರಿಂದ ಜಿಝಿಯಾ ವಸೂಲು ಮಾಡುತ್ತಿರಲಿಲ್ಲ. ಹಾಗೆಯೇ ಕೈರೋದಿಂದ ಕೆಂಪು ಸಮುದ್ರದ ವರೆಗೆ ಕಾಲುವೆಗಾಗಿ ಸ್ಥಳ ನಿಗದಿ ಪಡಿಸಲು ನೆರವಾದ ಮುಸ್ಲಿಮೇತರರಿಗೆ ಖಲೀಫ ಉಮರ್ ಫಾರೂಕ್‌ರು ಕರ ಮನ್ನಾ ಮಾಡಿದ್ದರು."

(ಇಮಾಮ್ ಸುಯೂತಿ: ಹುಸ್ನುಲ್ ಮುಹಾದರ ಫೀ ಅಖ್ಬಾರಿ ಮಿಸ್ರ್ ವಲ್ ಕಾಹಿರಾ:)

ಸುಲ್ತಾನ್ ಸಲಾಹುದ್ದೀನ್‌ರು ಸಿರಿಯಾದಿಂದ ಹಿಂದೆ ಸರಿಯಲು ನಿರ್ಬಂಧಿತರಾದಾಗ, ಊರವರಿಂದ ಸಂಗ್ರಹಿಸಿದ್ದ ಜಿಝಿಯಾವನ್ನು ವಾಪಾಸು ಕೊಟ್ಟಿದ್ದರು."

**(ಉದ್ಧರಣೆ: Do: Roy Choudhary)**

ಸಂಕ್ಷಿಪ್ತದಲ್ಲಿ, ಜಿಝಿಯಾವು ಧಾರ್ಮಿಕ ತೆರಿಗೆಯಲ್ಲ. ಆಗಿಯೂ ಇರಲಿಲ್ಲ. ಒಂದು ವೇಳೆ ಅದು ಧಾರ್ಮಿಕ ತೆರಿಗೆಯಾಗಿರುತ್ತಿದ್ದರೆ ಮಹಿಳೆಯರು, ಮಕ್ಕಳು, ವೃದ್ಧರು ಮತ್ತು ಪುರೋಹಿತರನ್ನು ಅದರಿಂದ ಮುಕ್ತಗೊಳಿಸುತ್ತಿರಲಿಲ್ಲ. ವಸ್ತುತಃ ಜಿಝಿಯಾವು ಯುದ್ಧ ತೆರಿಗೆಯಾಗಿದೆ. ಶಕ್ತಿ ಸಾಮರ್ಥ್ಯವಿದ್ದರೂ ಸೇನೆಯಲ್ಲಿ ಸೇರಲು ಸಿದ್ಧವಿಲ್ಲದವರು ಅದನ್ನು ನೀಡಬೇಕು. ಸೈನಿಕ ಸೇವೆಯನ್ನು ಕಡ್ಡಾಯಗೊಳಿಸಿದ ಸಂದರ್ಭಗಳಲ್ಲಿ ಅದನ್ನು ಕೈಬಿಡ ಲಾಗುತ್ತಿತ್ತು. ಹಾಗೆಯೇ ಅದು ಪ್ರಾಣ ಸೊತ್ತು ವಿತ್ತಗಳಿಗೆ ನೀಡಿದ ಭದ್ರತೆಯ ಪ್ರತಿಫಲವೂ ಆಗಿತ್ತು. ಅದೇ ವೇಳೆ ಇಸ್ಲಾಮೀ ರಾಷ್ಟ್ರದ ಮುಸ್ಲಿಮ್ ಪೌರರು ಕಡ್ಡಾಯವಾಗಿ ಸೇನೆಯಲ್ಲಿ

ೀವೆ ಸಲ್ಲಿಸಿದರೂ ಸರಕಾರಕ್ಕೆ ಝಕಾತ್ ನೀಡಲೇಬೇಕು. ಎಲ್ಲ ಕಾಲದಲ್ಲಿಯೂ ಝಕಾತ್‌ನ ಮೊತ್ತವು ಜಿಝಿಯಾಕ್ಕಿಂತ ಬಹಳಷ್ಟು ಅಧಿಕವಾಗಿತ್ತೆಂಬ ವಾಸ್ತವಿಕತೆಯನ್ನು ಇಲ್ಲಿ ಎತ್ತಿಹೇಳ ಬೇಕಾಗಿದೆ. ಆದ್ದರಿಂದ, ಇಸ್ಲಾಮಿ ರಾಷ್ಟ್ರದಲ್ಲಿ ಜಿಝಿಯಾ ನೀಡುವ ಮುಸ್ಲಿಮೇತರ ಪೌರರು ಮುಸ್ಲಿಮರಿಗಿಂತ ಹೆಚ್ಚಿನ ಸೌಲಭ್ಯ ಮತ್ತು ರಿಯಾಯಿತಿಗಳನ್ನು ಅನುಭವಿಸುತ್ತಿದ್ದರು.

## ಅನುಬಂಧ

1. ಇಸ್ಲಾಮಿ ರಾಷ್ಟ್ರದ ಪ್ರಥಮ ಸಂವಿಧಾನ
2. ಇತಿಹಾಸ ರಚನೆಯಲ್ಲಿ ಮೋಸಗಳು

### ಅನುಬಂಧ-1

# ಇಸ್ಲಾಮೀ ರಾಷ್ಟ್ರದ ಪ್ರಥಮ ಸಂವಿಧಾನ

ಪ್ರವಾದಿ ಮುಹಮ್ಮದ್‌ರು(ಸ) ತಮ್ಮ ಹುಟ್ಟೂರಾದ ಮಕ್ಕಾದಿಂದ ಮದೀನಕ್ಕೆ ವಲಸೆ ೋದರು. ಇದು ಇಸ್ಲಾಮಿನ ಸಂದೇಶ ಪ್ರಚಾರ ಇತಿಹಾಸದ ಸುಪ್ರಧಾನ ಘಟನೆಯಾಗಿತ್ತು. ಕ್ಕಾದ ಮಣ್ಣು, ಒಳಿತಿನ ಚಿಗುರುಗಳು ಸುಲಭದಲ್ಲಿ ಸಮೃದ್ಧವಾಗಿ ಬೆಳೆಯುವುದಕ್ಕೆ ೋಗ್ಯವಾಗಿರಲಿಲ್ಲ. ಆದರೆ, ಯಸ್ರಿಬ್‌ನ ಹಿನ್ನೆಲೆಯು ಸತ್ಯದ ಪ್ರಚಾರಕ್ಕೆ ತುಂಬಾ ನುಕೂಲವಾಗಿತ್ತು. ಪ್ರವಾದಿಯವರು ಅಲ್ಲಿಗೆ ತಲಪಿದ ಬಳಿಕ ಆ ನಗರದ ಹೆಸರನ್ನೂ ದಲಾಯಿಸಿದರು. ಅದು 'ಮದೀನತ್ತುನ್ನಬಿ' ಅರ್ಥಾತ್ ಪ್ರವಾದಿಯ ನಗರವಾಯಿತು.

ಮದೀನದಲ್ಲಿ ವಿವಿಧ ಧರ್ಮ ವಿಶ್ವಾಸಿಗಳಿದ್ದರು. ಪ್ರವಾದಿಯವರ ಆಗಮನದಿಂದ ಲ್ಲಿ ಇಸ್ಲಾಮೀ ರಾಷ್ಟ್ರ ಸ್ಥಾಪನೆಯಾಯಿತು. ಪ್ರವಾದಿವರ್ಯರೇ(ಸ) ಅದರ ನಾಯಕ ಾಗಿದ್ದರು. ಅದು ಯಹೂದಿಯರು, ಬಹುದೇವವಿಶ್ವಾಸಿಗಳು ಮತ್ತು ಮುಸ್ಲಿಮರನ್ನೊಳ ೊಂಡ ಕೋಮು ವೈವಿಧ್ಯತೆಯ ರಾಷ್ಟ್ರವಾಗಿತ್ತು.

ಪ್ರವಾದಿಯವರು ಮದೀನಕ್ಕಾಗಿ ಒಂದು ನೀತಿ ಸಂಹಿತೆ ತಯಾರಿಸಿದರು. ಆಧುನಿಕ ಾರಿಭಾಷಿಕದಲ್ಲಿ ಅದನ್ನು ಸಂವಿಧಾನವೆಂದು ಕರೆಯಬಹುದು. ವಿಶ್ವಾಸ, ಆರಾಧನಾ ರ್ಮ ಮತ್ತು ಆಚಾರ ಸಂಪ್ರದಾಯ ಇತ್ಯಾದಿಗಳಲ್ಲಿ ಬಹಳಷ್ಟು ಭಿನ್ನತೆಯಿದ್ದರೂ ರಾಷ್ಟ್ರದ ೌರರೆಲ್ಲರನ್ನೂ ಒಂದೇ ಜನತೆಯೆಂದು ಅದರಲ್ಲಿ ಪರಿಗಣಿಸಲಾಗಿತ್ತು. ಅದು ಎಲ್ಲ ರ್ಮೀಯರಿಗೂ ಸಮಾನ ಪೌರತ್ವ ಮತ್ತು ಹಕ್ಕು ಬಾಧ್ಯತೆಗಳನ್ನು ಘೋಷಿಸಿತು. ಅದರ ೋಷಣೆಗಳನ್ನು ಪರಿಚ್ಛೇದಗಳಾಗಿ ವಿಂಗಡಿಸಿ ಇಲ್ಲಿ ಕೊಡಲಾಗಿದೆ.

1. ಇದು ಕುರೈಶರು ಮತ್ತು ಮದೀನದವರಾದ ವಿಶ್ವಾಸಿಗಳೊಡನೆಯೂ ಮುಸ್ಲಿಮರು ಮತ್ತು ಅವರನ್ನು ಅನುಗಮಿಸಿ ಅವರೊಡನೆ ಸೇರಿ ಅವರೊಂದಿಗೆ ರಕ್ಷಣಾ ಕಾರ್ಯಾಚರಣೆಯಲ್ಲಿ ನಿರತರಾಗಿರುವ ಎಲ್ಲರೊಡನೆಯೂ ದೇವನ ಪ್ರವಾದಿ ಮತ್ತು ದಾಸನಾಗಿರುವ ಮುಹಮ್ಮದ್(ಸ) ಘೋಷಿಸುವ ನೀತಿಸಂಹಿತೆಯಾಗಿದೆ.

2. ಇವರೆಲ್ಲರೂ ಒಂದೇ ಜನತೆ(ಉಮ್ಮತ್)ಯಾಗಿದ್ದಾರೆ. ಇತರರು ಅದರಲ್ಲಿ ಸೇರೀ

3. ಕುರೈಶೀ ಮುಹಾಜಿರ್‌ಗಳಿಗೆ ಕೆಲವು ಹೊಣೆಗಾರಿಕೆಗಳಿವೆ. ಅವರಿಗೆ ಸಂಬಂಧ ಪ ಕೈದಿಗಳನ್ನು ಸತ್ಯವಿಶ್ವಾಸಿಗಳಲ್ಲಿರುವ ನ್ಯಾಯ ನೀತಿಯನ್ವಯ ಪರಿಹಾರ ಧ ನೀಡಿ ಪುನಃ ಬಿಡುಗಡೆಗೊಳಿಸಬೇಕು.[1]

4. ಔಸ್ ಗೋತ್ರದವರಿಗೆ ಅವರ ಸಂಪ್ರದಾಯದನ್ವಯ ಹಿಂದಿನಂತೆಯೇ ಹೊಣೆಗಾ ಗಳಿವೆ. ಅವರ ಪ್ರತಿಯೊಂದು ವಿಭಾಗವೂ ತನಗೆ ಸಂಬಂಧಿಸಿದ ಕೈದಿಗಳನ ವಿಶ್ವಾಸಿಗಳಲ್ಲಿ ಜಾರಿಯಲ್ಲಿರುವ ನ್ಯಾಯ ನೀತಿಯಂತೆ ಪರಿಹಾರ ಧನ ನೀ ವಿಮೋಚನೆಗೊಳಿಸಬೇಕು. (ಸಾಇದ, ಅಲ್ ಹಾರಿಸ್, ಜೂಶಂ, ಅನ್ನಜ್ಜಾರ ಅಮ್ರ್ ಬಿನ್ ಔಫ್, ಅನ್ನಬೀತ್ ಮುಂತಾದ ಅನ್ಸಾರ್‌ಗಳಾಗಿದ್ದ ಎಲ್ಲ ಗೋತ್ರಗ ಹೆಸರೆತ್ತಿ ಹೇಳಿ ಈ ನಿಬಂಧನೆಗಳನ್ನು ಎಲ್ಲರಿಗೂ ಅನ್ವಯಗೊಳಿಸಿದರು.)

5. ಸತ್ಯವಿಶ್ವಾಸಿಗಳಲ್ಲಿ ಯಾರೊಬ್ಬರನ್ನೂ ಗೌರವಾರ್ಹ ಪ್ರಾಯಶ್ಚಿತ್ತ ಅಥವಾ ಪರಿಹಾ ಧನ ನೀಡದೆ ಅಸಹಾಯಕಗೊಳಿಸುವುದಿಲ್ಲ.

6. ಓರ್ವ ವಿಶ್ವಾಸಿಯು ಸ್ವತಂತ್ರಗೊಳಿಸಿದ ಗುಲಾಮನೊಂದಿಗೆ ಬೇರೊಬ್ಬ ವಿಶ್ವಾಸಿಯ ಅವರ ಒಪ್ಪಿಗೆಯಿಲ್ಲದೆ ಮೈತ್ರಿ ಬೆಳೆಸುವುದಿಲ್ಲ.

7. ಸತ್ಯವಿಶ್ವಾಸಿಗಳಲ್ಲಿ ಯಾರಾದರೂ ಅಕ್ರಮ, ಅನ್ಯಾಯ, ಪಾಪಕಾರ್ಯ, ಪ್ರತೀಕಾ ಅಥವಾ ವಿಶ್ವಾಸಿಗಳಲ್ಲಿ ಆಂತರಿಕ ಕಲಹ ಹುಟ್ಟಿಸಲು ಪ್ರಯತ್ನಿಸಿದರೆ ಎ ಮುಸ್ಲಿಮರೂ ದೇವ ಭಕ್ತರೂ ಅವರನ್ನು ಒಗ್ಗಟ್ಟಿನಿಂದ ಎದುರಿಸುವರು ದುಷ್ಕರ್ಮಿಯು ತಮ್ಮ ಪೈಕಿ ಯಾರ ಮಗನಾದರೂ ಸರಿಯೆ.

8. ಓರ್ವ ಅವಿಶ್ವಾಸಿಗೆ ಪ್ರತಿಯಾಗಿ ಓರ್ವ ವಿಶ್ವಾಸಿಯು ಇನ್ನೊಬ್ಬ ವಿಶ್ವಾಸಿಯನ್ ವಧಿಸುವುದಿಲ್ಲ. ಓರ್ವ ಸತ್ಯವಿಶ್ವಾಸಿಯು ಇನ್ನೋರ್ವ ಸತ್ಯವಿಶ್ವಾಸಿಯ ವಿರು ಸತ್ಯನಿಷೇಧಿಗೆ ನೆರವು ನೀಡುವುದಿಲ್ಲ.

9. ದೇವನ ಈ ನೀತಿಯು ಅವಿಭಾಜ್ಯವಾಗಿದೆ. ಎಲ್ಲ ವಿಶ್ವಾಸಿಗಳಿಗೂ ತಮ್ಮ ಕೂಟ ತೀರಾ ನಗಣ್ಯ ವ್ಯಕ್ತಿಗೂ ಅಭಯ ನೀಡುವ ಹೊಣೆಯಿದೆ. ಸತ್ಯವಿಶ್ವಾಸಿಗಳ

---

1. ಕೊಲೆಯಾದ ವ್ಯಕ್ತಿಯ ಕುಟುಂಬಿಕರು ಕೊಲೆಗಾರನಿಂದ ಪರಿಹಾರಧನ ಪಡೆದು ಕೊಲೆಗಾರನನ್ನು ಪ್ರತೀಕಾರ ಕ್ರಮಗಳಿಂದ ಮುಕ್ತಗೊಳಿಸುವ ರೂಢಿಯು ಅರಬರಲ್ಲಿ ಪ್ರಾಚೀನ ಕಾಲದಲ್ಲಿಯೇ ಜಾರಿಯಲ್ಲಿತ್ತು. ಕೊಲೆಗಾರನ ಕುಟುಂಬಿಕರು ಪ್ರಾಯಶ್ಚಿತ್ತದ ಹಣವನ್ನು ಸಂದಾಯ ಮಾಡು ತ್ತಿದ್ದರು, ಆದರೆ, ಈ ನೀತಿಸಂಹಿತೆಯು ಎಲ್ಲ ಮುಹಾಜಿರರನ್ನು ಒಂದೇ ಕುಟುಂಬವೆಂದು ಪರಿಗಣಿಸಿ ಅವರೆಲ್ಲರೂ ಪರಸ್ಪರ ಸಹಕರಿಸಿ ಸಾಮೂಹಿಕವಾಗಿ ನೀಡಬೇಕೆಂದು ಘೋಷಿಸಿತು.

ಪರಸ್ಪರ ಸಂರಕ್ಷಣೆಯ ಹೊಣೆಗಾರರಾಗಿದ್ದಾರೆ. ಇತರ ಜನವಿಭಾಗಗಳು ಅದರಿಂದ ಹೊರತಾಗಿದ್ದಾರೆ.

.0. ನಮ್ಮನ್ನು ಬೆಂಬಲಿಸುವ ಯಹೂದಿಯರು ನ್ಯಾಯ, ಸಮಾನತೆ ಮತ್ತು ನಮ್ಮ ಸೌಹಾರ್ದ-ಸಹಾನುಭೂತಿಗೆ ಅರ್ಹರಾಗಿರುತ್ತಾರೆ. ಅವರೊಂದಿಗೆ ಅನ್ಯಾಯ ಅಥವಾ ಪಕ್ಷಪಾತ ತೋರಿಸುವುದಿಲ್ಲ, ಅವರು ಅಕ್ರಮಕ್ಕೆ ಗುರಿಯಾಗಲಾರರು. ಅವರ ವಿರುದ್ಧ ಯಾರಿಗೂ ಸಹಾಯ ದೊರೆಯಲಾರದು.

11. ಸತ್ಯವಿಶ್ವಾಸಿಗಳು ಮಾಡುವ ಶಾಂತಿ ಒಪ್ಪಂದವು ಸುಭದ್ರವಾಗಿರುವುದು. ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುವಾಗ ಓರ್ವ ವಿಶ್ವಾಸಿಯು ಮತ್ತೊಬ್ಬ ವಿಶ್ವಾಸಿಯನ್ನು ನಿರ್ಲಕ್ಷಿಸಿ ಒಪ್ಪಂದ ಮಾಡಿಕೊಳ್ಳುವುದಿಲ್ಲ, ಅದು ಸಂಪೂರ್ಣ ನ್ಯಾಯನಿಷ್ಠೆ ಮತ್ತು ಸಮಾನತೆಯ ಬುನಾದಿಯಲ್ಲಿರುವುದು.

12. ಎಲ್ಲ ಯುದ್ಧಗಳಲ್ಲಿಯೂ ಕಾದಾಡುವ ಮುಂಚೂಣಿ ತಂಡದ ಹಿಂದೆ ಸಮರ ಸಜ್ಜಿತವಾದ ದ್ವಿತೀಯ ತಂಡವಿರುವುದು. ದೇವನ ಹಾದಿಯಲ್ಲಿ ಹತನಾಗುವ ಪ್ರತಿಯೊಬ್ಬ ವಿಶ್ವಾಸಿಗಾಗಿ ಹೋರಾಡಬೇಕಾದುದು ಎಲ್ಲ ವಿಶ್ವಾಸಿಗಳ ಕರ್ತವ್ಯ ವಾಗಿದೆ.

13. ಭಕ್ತರಾದ ಸತ್ಯವಿಶ್ವಾಸಿಗಳು ಅತ್ಯುತ್ಕೃಷ್ಟ, ಪಾವನ ಸನ್ಮಾರ್ಗದಲ್ಲಿರುವರು. ಓರ್ವ ಕುರೈಶಿ (ಮದೀನದ ಇಸ್ಲಾಮಿ ರಾಷ್ಟ್ರದೊಡನೆ ವೈರತ್ವವಿರುವ ಮಕ್ಕಾ ನಿವಾಸಿ) ಅಥವಾ ಆತನ ಸಂಪತ್ತಿಗೆ ಮದೀನದ ಬಹುದೇವವಿಶ್ವಾಸಿಯು ರಕ್ಷಣೆ ಒದಗಿಸು ವುದಿಲ್ಲ ಅಥವಾ ಆ ವಿಷಯವನ್ನು ಸತ್ಯವಿಶ್ವಾಸಿಗಳಿಂದ ಮರೆಮಾಚುವುದಿಲ್ಲ, ಹಾಗೆಯೇ ಕುರೈಶರಿಗೆ ವಿಶ್ವಾಸಿಗಳ ವಿರುದ್ಧವಾಗಿ ಸಹಾಯ ಮಾಡುವುದಿಲ್ಲ.

14. ನ್ಯಾಯೋಚಿತ ಕಾರಣಗಳಿಲ್ಲದೆ ಓರ್ವ ಸತ್ಯವಿಶ್ವಾಸಿಯನ್ನು ಯಾರಾದರೂ ವಧಿಸಿದರೆ ಹಂತಕನು ಪ್ರತೀಕಾರ ಕ್ರಮಕ್ಕೆ ಅರ್ಹನಾಗುತ್ತಾನೆ. ಆದರೆ, ಹತನಾದವನ ವಾರೀಸು ದಾರರು ದಂಡ ತೆತ್ತು ಪ್ರತೀಕಾರ ಕ್ರಮಗಳಿಂದ ಹಂತಕನನ್ನು ಮುಕ್ತಗೊಳಿಸ ಬಹುದು. ಅನ್ಯಥಾ ಹಂತಕನ ವಿರುದ್ಧ ಕ್ರಮಕ್ಕೈಗೊಳ್ಳಲು ಎಲ್ಲ ಸತ್ಯವಿಶ್ವಾಸಿಗಳೂ ಹೊಣೆಗಾರರಾಗಿರುತ್ತಾರೆ. ಅವರಿಗೆ ಆ ಹೊಣೆಯನ್ನು ತೊರೆಯುವ ಅನುಮತಿಯಿಲ್ಲ.

15. ಸತ್ಯವಿಶ್ವಾಸಿಗಳೆಲ್ಲರೂ ಈ ನಿಬಂಧನೆಗಳನ್ನು ಪಾಲಿಸುವರು.

16. ಈ ನೀತಿ ಸಂಹಿತೆಯನ್ನು ಅಂಗೀಕರಿಸಿ, ಅಲ್ಲಾಹ್ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿರಿಸುವ ಪ್ರತಿಯೊಬ್ಬ ಸತ್ಯವಿಶ್ವಾಸಿಯೂ ಅಪರಾಧಿಗೆ ನೆರವು ಅಥವಾ ಆಶ್ರಯ ನೀಡಬಾರದು. ಯಾರಾದರೂ ಹಾಗೆ ಮಾಡಿದರೆ ಅಂತ್ಯದಿನದಲ್ಲಿ

ಅಲ್ಲಾಹನ ಶಾಪಕೋಪಗಳಿಗೆ ಪಾತ್ರವಾಗಬೇಕಾಗುವುದು. ಅವರ ಪಶ್ಚಾತ್ತಾ
ಮತ್ತು ಪ್ರಾಯಶ್ಚಿತ್ತ ಸ್ವೀಕರಿಸಲ್ಪಡಲಾರದು.

17. ನಿಮ್ಮ ಮಧ್ಯೆ ಯಾವುದಾದರೂ ವಿಷಯದಲ್ಲಿ ಭಿನ್ನಮತವುಂಟಾದರೆ ಅದರ
ತೀರ್ಪಿಗಾಗಿ ಅಲ್ಲಾಹ್ ಮತ್ತು ಆತನ ಪ್ರವಾದಿಯ ಮುಂದಿಡಬೇಕು.

18. ಯಹೂದಿಯರು ವಿಶ್ವಾಸಿಗಳ ಜತೆಗೂಡಿ ಯುದ್ಧ ಮಾಡುವುದಿದ್ದರೆ, ಅದ
ಅಗತ್ಯವಿರುವ ಖರ್ಚು ವೆಚ್ಚಗಳನ್ನು ವಿಶ್ವಾಸಿಗಳಂತೆಯೇ ಅವರು ಸ್ವತಃ ವಹಿಸಬೇಕ

19. ಔಫ್ ಗೋತ್ರದ ಯಹೂದಿಯರು ವಿಶ್ವಾಸಿಗಳ ಜತೆಯಲ್ಲಿ ವಾಸಿಸುವ ವಿಭಾ
ವಾಗಿದ್ದಾರೆ. ಯಹೂದಿಯರಿಗೂ ಸ್ವಂತ ಧರ್ಮವಿದೆ. ಮುಸ್ಲಿಮರಿಗೂ ಇದ
ಹಾಗಿದ್ದರೂ ಉಭಯತ್ರರೂ ಸೇರಿ ಒಂದು ಜನತೆ (ಉಮ್ಮತ್)ಯಾಗಿರುತ್ತಾ

20. ಆದರೆ ಅಕ್ರಮ ಅನ್ಯಾಯವೆಸಗುವವರು ಅದರಿಂದ ಹೊರತಾಗಿರುತ್ತಾರೆ. ವಸ್ತುತ
ಅವರು ಸ್ವದೇಹವನ್ನೂ ಸ್ವಂತ ಕುಟುಂಬವನ್ನೂ ನಾಶಪಡಿಸುತ್ತಾರೆ.

21. ನಜ್ಜಾರ್, ಹಾರಿಸ್, ಸಈದ್, ಜೂಶಂ, ಔಫ್, ಸಅ್‌ಲಬ, ಜಫ್ನ, ಶೆಯ್ತು
ಮುಂತಾದ ಗೋತ್ರಗಳ ಯಹೂದಿಯರೆಲ್ಲರಿಗೂ ಔಫ್ ಗೋತ್ರದ ಯಹೂದಿಯ
ಎಲ್ಲ ಹಕ್ಕು ಬಾಧ್ಯತೆಗಳಿವೆ.

22. ಸಅಲಬ್ ಗೋತ್ರದ ಮಿತ್ರ ಕೂಟಗಳಿಗೂ ಇದು ಅನ್ವಯವಾಗುತ್ತದ
ಯಹೂದಿಯರ ಸಂಗಡಿಗರ ಸ್ಥಿತಿಯೂ ಅಷ್ಟೆ.

23. ಈ ಪೈಕಿ ಯಾರೊಬ್ಬರೂ ಮುಹಮ್ಮದ್‌ರ ಅನುಮತಿಯಿಲ್ಲದೆ ಯುದ್ಧಕ್ಕೆ ಹೊರ
ಬಾರದು. ಆದರೆ ಗಾಯಕ್ಕೆ ತಕ್ಕ ಪ್ರತೀಕಾರ ಪಡೆಯಲು ಇದು ಅವರಿ
ಅಡ್ಡಿಯಾಗುವುದಿಲ್ಲ.

24. ಯಾರಾದರೂ ಓರ್ವರನ್ನು ವಧಿಸಿದರೆ, ಹಂತಕ ಮತ್ತು ಆತನ ಕುಟುಂಬವ
ಅದಕ್ಕೆ ಜವಾಬ್ದಾರಿಯಾಗಿರುವುದು.

25. ಯಹೂದಿಯರು ಮತ್ತು ಮುಸ್ಲಿಮರು ತಂತಮ್ಮ ಖರ್ಚಿನಿಂದ ಬದುಕಬೇಕು
ಆದರೆ, ಈ ಒಪ್ಪಂದವನ್ನು ಮುರಿಯುವವರ ವಿರುದ್ಧವಾಗಿ ಉಭಯ ವಿಭಾ
ದವರೂ ಒಗ್ಗಟ್ಟಾಗುವರು.

26. ಈ ನೀತಿ ಸಂಹಿತೆಯನ್ನು ಅಂಗೀಕರಿಸಿದವರ ವಿರುದ್ಧ ಯಾರಾದರೂ ಯುದ್ಧ
ಸಾರಿದರೆ ಈ ನೀತಿ ಸಂಹಿತೆಗೊಳಪಟ್ಟ ಮಂದಿ ಪರಸ್ಪರ ಸಹಕರಿಸಿ ಪ್ರತ್ಯಾಕ್ರಮಣ
ನಡೆಸುವರು.

27. ಈ ಸಂಹಿತೆಯನ್ನು ಅಂಗೀಕರಿಸಿದವರ ಪರಸ್ಪರ ಸಂಬಂಧಕ್ಕೆ ಹಿತಾಕಾಂಕ್ಷೆಯೇ
ಆಧಾರವಾಗಿರುವುದು.

28. ಆದರೆ ಮಿತ್ರಪಕ್ಷಗಳ ಯಾರಾದರೊಬ್ಬರು ಮಾಡಿದ ಅಪರಾಧಕ್ಕಾಗಿ ಇತರ ಪಕ್ಷವು ಅಪರಾಧಿಯಾಗುವುದಿಲ್ಲ. ಮರ್ದಿತನಿಗೆ ಮಾತ್ರ ಸಹಾಯ ಮಾಡಬೇಕು.
29. ಈ ಸಂಹಿತೆಯನ್ನು ಅಂಗೀಕರಿಸುವವರಿಗೆ ಯಸ್ರಿಬ್, ಆದರಣೀಯ ಯುದ್ಧ ನಿಷೇಧ ವಲಯವಾಗಿರುವುದು.
30. ಮೋಸ ಮತ್ತು ಅಪರಾಧ ಕೃತ್ಯಗಳನ್ನೆಸಗದಿರುವ ತನಕ ನೆರೆಕರೆಯವರನ್ನು ತಮ್ಮಂತೆಯೇ ಭಾವಿಸಬೇಕು.
31. ಕುಟುಂಬದವರ ಅನುಮತಿಯಿಲ್ಲದೆ ಯಾವ ಮಹಿಳೆಯ ಸಂರಕ್ಷಣೆಯ ಹೊಣೆಯನ್ನೂ ಯಾರೂ ವಹಿಸಬಾರದು.
32. ಈ ಸಂಹಿತೆಯನ್ನು ಅಂಗೀಕರಿಸಿದವರ ಮಧ್ಯೆ ಸಂಹಿತೆಯ ಉಲ್ಲಂಘನೆಗೆ ಕಾರಣ ವಾದೀತೆಂಬ ಆಶಂಕೆ ಮೂಡಿಸುವ ಏನಾದರೂ ವಿವಾದ ಅಥವಾ ಭಿನ್ನಮತ ವುಂಟಾದರೆ ಅದನ್ನು ಅಲ್ಲಾಹ್ ಮತ್ತು ಪ್ರವಾದಿಯತ್ತ ಮರಳಿಸಬೇಕು. ಅಂತಿಮ ನಿರ್ಣಯದ ಅಧಿಕಾರವು ಅಲ್ಲಾಹ್ ಮತ್ತು ಪ್ರವಾದಿ ಮುಹಮ್ಮದ್‌ರಿಗೆ(ಸ) ಇರುವುದು. ಅಲ್ಲಾಹನು ಈ ಒಪ್ಪಂದದಲ್ಲಿರುವ ಒಳಿತು ಮತ್ತು ಗೋಪ್ಯದ ಸಂರಕ್ಷಕನಾಗಿದ್ದಾನೆ.
33. ಕುರೈಶರು (ಮಕ್ಕಾದ ವೈರಿಗಳು) ಮತ್ತು ಅವರ ಬೆಂಬಲಿಗರಿಗೆ ಅಭಯ ನೀಡ ಲಾಗುವುದಿಲ್ಲ.
34. ಯಸ್ರಿಬ್ ಆಕ್ರಮಿಸಲ್ಪಟ್ಟರೆ ಈ ಸಂಹಿತೆಯನ್ನು ಅಂಗೀಕರಿಸುವವರು ಒಗ್ಗಟ್ಟಿನಿಂದ ವೈರಿಗಳ ವಿರುದ್ಧ ಹೋರಾಡುವರು.
35. ಯಹೂದಿಯರನ್ನು ಮಿತ್ರ ಪಕ್ಷಗಳು ಸಂಧಾನಕ್ಕೆ ಕರೆದರೆ, ಅವರು ಒಪ್ಪಂದ ಮಾಡಿಕೊಳ್ಳಬಹುದಾಗಿದೆ.
36. ಹಾಗೆಯೇ ಸಂಧಾನಕ್ಕೆ ಮುಸ್ಲಿಮರನ್ನು ಕರೆದರೂ ಅವರಿಗೂ ಆ ಹಕ್ಕಿರುವುದು.
37. ಈ ಸಂಹಿತೆಯನ್ನು ಅಂಗೀಕರಿಸುವ ಎಲ್ಲ ವಿಭಾಗಗಳಿಗೂ ಸಲ್ಲತಕ್ಕ ಹಕ್ಕುಗಳನ್ನು ಯಾವ ಕಾರಣಕ್ಕೂ ನಿಷೇಧಿಸಲಾಗುವುದಿಲ್ಲ.
38. ಔಫ್ ಗೋತ್ರದ ಯಹೂದಿಯರು ಮತ್ತು ಅವರ ಮಿತ್ರ ಕಕ್ಷಿಗಳಿಗೆ, ಈ ಒಪ್ಪಂದವನ್ನು ಅಂಗೀಕರಿಸಿದ ಇತರ ವಿಭಾಗಗಳಿಗೆ ಲಭಿಸುವ ಎಲ್ಲ ಸೌಲಭ್ಯಗಳೂ ದೊರೆಯುವುದು.
39. ಆದರೆ ಪುಣ್ಯ ಮತ್ತು ಪಾಪಗಳು ವ್ಯತಿರಿಕ್ತವಾಗಿವೆ. ಪಾಪದ ಹೊಣೆಯು ಅದನ್ನು ಮಾಡಿದವರಿಗೆ ಮಾತ್ರವಾಗಿದೆ.
40. ಅಕ್ರಮಿ ಮತ್ತು ಅಪರಾಧಿಗಳಿಗೆ ಈ ನೀತಿಸಂಹಿತೆಯು ಯಾವ ಸಂರಕ್ಷಣೆಯನ್ನೂ

ನೀಡಲಾರದು. ಅವರ ದಂಡನೆಗೆ ಇದು ಅಡ್ಡಿಯಾಗಲಾರದು.

41. ಈ ನಗರದಿಂದ ಹೊರಹೋಗುವವರೂ ಹೋಗದವರೂ ನಿರ್ಭೀತರು.

42. ಆದರೆ ಅಕ್ರಮ ಮತ್ತು ಅಪರಾಧಿಗಳಿಗೆ ಇದು ಅನ್ವಯವಾಗುವುದಿಲ್ಲ.

43. ಭಯಭಕ್ತಿಯಿಂದ ಸತ್ಕರ್ಮವೆಸಗುವವರಿಗೆ ಅಲ್ಲಾಹನ ಅಭಯ ಮ: ಸಂರಕ್ಷಣೆಯಿದೆ.

ಅನುಬಂಧ-2

# ಇತಿಹಾಸ ರಚನೆಯಲ್ಲಿ ಮೋಸಗಳು

[ಖ್ಯಾತ ವಿದ್ವಾಂಸ, ಚಿಂತಕ ಮತ್ತು ಇತಿಹಾಸ ಸಂಶೋಧಕರಾದ ಶ್ರೀ ಬಿ.ಎನ್. ಪಾಂಡೆ 1985ರ ಡಿಸೆಂಬರ್ 19, 20, 21ರಂದು ಪಾಟ್ನಾದಲ್ಲಿ ಜರಗಿದ 'ಖುದಾ ಬಕ್ಷ್' ವಾರ್ಷಿಕ ಸಮಾರಂಭದಲ್ಲಿ ಮಾಡಿದ ಭಾಷಣಗಳ ಸಂಗ್ರಹ ವಾಗಿರುವ 'ಇಸ್ಲಾಮ್ ಏಂಡ್ ಇಂಡಿಯನ್ ಕಲ್ಚರ್' ಎಂಬ ಪುಸ್ತಕದ ಆಯ್ದ ಭಾಗಗಳನ್ನು ಇಲ್ಲಿ ಅನುಬಂಧವಾಗಿ ಸೇರಿಸಲಾಗಿದೆ.]

ಭಾರತೀಯ ಇತಿಹಾಸದ ಕುರಿತು ವ್ಯಾಪಕ ಮತ್ತು ಗಹನವಾದ ನಿಷ್ಪಕ್ಷ ಅಧ್ಯಯನ ತುರ್ತಾಗಿ ನಡೆಯಬೇಕಾಗಿದೆ. ಈ ಅಧ್ಯಯನವು ಹಿಂದಿಗಿಂತ ಇಂದು ಅತ್ಯಗತ್ಯವಾಗಿದೆ. ಈ ನಿಟ್ಟಿನಲ್ಲಿ ಇತಿಹಾಸವನ್ನು ಪೌರಾಣಿಕ ಇತಿಹಾಸ, ಆಧುನಿಕ ಇತಿಹಾಸ, ಮಧ್ಯಕಾಲೀನ ಇತಿಹಾಸವೆಂದು ವಿಂಗಡಿಸಬಹುದೇ ಎಂಬ ಪ್ರಶ್ನೆ ಪ್ರಸ್ತುತವಾಗಿದೆ. ಆಕ್ಸ್‌ಫರ್ಡ್‌ನ ಮಾನ್ಯ ಪ್ರೊಫೆಸರ್ ಫ್ರೀಮ್ಯಾನ್‌ರು, ಇತಿಹಾಸದ ಮುಂದುವರಿಕೆ ಮತ್ತು ಐಕ್ಯದ ಭದ್ರತೆಯೇ ಆಧುನಿಕ ವೈಜ್ಞಾನಿಕ ದೃಷ್ಟಿಕೋನದಿಂದ ಇತಿಹಾಸವನ್ನು ಕಲಿಸುವುದರ ಮೂಲಸಿದ್ಧಾಂತವೆಂದು ಹೇಳಿದ್ದಾರೆ. ಅದನ್ನು ಸಮರ್ಥಿಸಿ ಡಾ। ಬಿ.ಆರ್. ಭಂಡಾರ್ಕರ್ ಹೀಗೆ ಹೇಳಿದ್ದಾರೆ:

"ಭಾರತದ ಇತಿಹಾಸವನ್ನು ಮೂರು ಭಾಗ ಮಾಡಿ ಹಿಂದೂ ಕಾಲ, ಮುಹಮ್ಮದೀಯ ಕಾಲ, ಬ್ರಿಟಿಷ್ ಕಾಲವೆಂದು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳುವುದು ಮಹಾ ಅವಿವೇಕತನ ವಾಗಿದೆ. ಒಂದನೆಯದಾಗಿ, ಇತಿಹಾಸವು ಹಿಂದು, ಮುಸ್ಲಿಮ್, ಕ್ರೈಸ್ತವಾಗಿರುವಂತೆಯೇ ಪೌರಾಣಿಕ, ಮಧ್ಯಕಾಲ ಮತ್ತು ಆಧುನಿಕವೂ ಆಗಿರುತ್ತದೆ. ಸಾಮುದಾಯಿಕ ಆಧಾರದಲ್ಲಿರುವ ಭಾರತೀಯ ಇತಿಹಾಸದ ವಿಭಜನೆಯನ್ನು ಎಲ್ಲ ಇತಿಹಾಸ ಪುಸ್ತಕಗಳಿಂದಲೂ ತೆಗೆದು ಹಾಕಬೇಕು. ಎರಡನೆಯದಾಗಿ, ಪ್ರಸ್ತುತ ವಿಭಜನೆಯು ಅಧ್ಯಯನಕ್ಕೆ, ವಿಶೇಷತಃ ಸಾಂಸ್ಕೃತಿಕ ವಿಶ್ಲೇಷಣೆಗೆ ಸಹಾಯಕವಾಗಬಹುದು. ಆದರೆ ಇತಿಹಾಸವು ಮುಂದುವರಿಕೆಯಾಗಿದೆಯೆಂಬ ವಿಷಯವನ್ನು ಯಾವಾಗಲೂ ಗಮನದಲ್ಲಿರಿಸಬೇಕು. ವಿಶೇಷ ಅಧ್ಯಯನಗಳಿಗಾಗಿ ಮಾತ್ರ

ಇತಿಹಾಸ ಕಾಲಗಳನ್ನು ತಾತ್ಕಾಲಿಕವಾಗಿ ವಿಭಜಿಸಬಹುದಾಗಿದೆ. ಇದು ಇತಿಹಾಸದ ಮು
ತತ್ವವೆಂದು ಇತಿಹಾಸ ವಿದ್ಯಾರ್ಥಿಗಳೆಲ್ಲರೂ ಒಪ್ಪುತ್ತಾರೆ.

ಭಾರತದ ವಿವಿಧ ಧಾರ್ಮಿಕ ಸಮುದಾಯಗಳಲ್ಲಿರುವ ಪರಸ್ಪರ ಅನೈಕ್ಯ, ಅಸಹಿಷ
ಮತ್ತು ಅಪನಂಬಿಕೆಯ ಕಾರಣಗಳನ್ನು ನಾವು ಪರಿಶೀಲಿಸಬೇಕಾಗಿದೆ. ಈ ತಪ್ಪುತಿಳುವಳಿಕೆಯ
ನಾನಾ ರೂಪದಲ್ಲಿ ಹುಟ್ಟಿ ಹಲವು ಭಾವಗಳನ್ನು ಪ್ರದರ್ಶಿಸುತ್ತದೆ. ಉಭಯ ವರ್ಗ
ಸಂಪ್ರದಾಯವಾದಿಗಳು ಭಾರತೀಯ ಇತಿಹಾಸದ ವಾಸ್ತವಿಕಾಂಶಗಳನ್ನು ದುರ್ವ್ಯಾಖ್ಯಾ
ಇತಿಹಾಸದ ಘಟನೆಗಳನ್ನು ತಮ್ಮ ವಿಚಾರಧಾರೆಗೆ ಅನುಕೂಲವಾಗುವ ರೀತಿಯಲ್ಲಿ ಮಂಡಿಸ
ಪ್ರಯತ್ನಿಸಿರುವುದು ಕಂಡು ಬರುತ್ತದೆ. ಜನಸಮುದಾಯ ಮತ್ತು ಅವರ ಧ್ಯೇಯಗಳ ಬ
ನಮ್ಮ ನಿರ್ಣಯವು ಅತಿರಂಜಿತವಾಗಿರುವುದೇ ಎಲ್ಲ ಗೊಂದಲಗಳಿಗೆ ಕಾರಣ. ಕ್ಷು
ಘಟನೆಗಳನ್ನು ಎತ್ತಿಹಿಡಿದು- ಧರ್ಮ, ವಿವಾದ, ಕಾನೂನು ಮತ್ತು ಶಿಸ್ತು ಪಾಲನೆಯ ಕ್ರಮ
ಅವುಗಳನ್ನು ಉದ್ದೇಶಪೂರ್ವಕ, ಏಕಪಕ್ಷೀಯ ಅಥವಾ ಯೋಜಿತವೆಂದು ಪ್ರತಿಬಿಂಬಿಸ
ಪ್ರಯತ್ನಿಸಲಾಗುತ್ತದೆ. ಈ ಸಂಶಯವು ಜೀವನದ ದೃಷ್ಟಿಕೋನಗಳನ್ನು ಸಂಪೂರ್ಣ ಅಡಿಮೇ
ಗೊಳಿಸುವ ಆಚಾರ, ನಡವಳಿಕೆ, ವಸ್ತ್ರಧಾರಣೆ ಅಥವಾ ಭಾಷೆಯಲ್ಲಿರುವ ಸಹಜ ಭಿನ್ನ
ಗಳನ್ನು ವೈಭವೀಕರಿಸಿ ಸಾಂಸ್ಕೃತಿಕ ರಂಗಗಳಲ್ಲಿಯೂ ಆರ್ಥಿಕ-ಸಾಮಾಜಿಕ-ರಾಜಕೀಯ
ಆಧ್ಯಾತ್ಮಿಕ ರಂಗಗಳಲ್ಲಿಯೂ ಅಪಾರ ಭಿನ್ನತೆಗಳಿವೆಯೆಂದು ಚಿತ್ರೀಕರಿಸಲಾಗುತ್ತದೆ.
ಹಿನ್ನೆಲೆಯಲ್ಲಿ ಯಾವನಾದರೂ ವ್ಯಕ್ತಿ ಅಥವಾ ಕೆಲವಾರು ಜನರ ಸ್ವಂತ ಸಮಸ್ಯೆಗಳಿಂದಾಗು
ಜಗಳಗಳು ಸಾಮಾಜಿಕ, ಸಾಂಸ್ಕೃತಿಕ ಮತ್ತು ಸಾಮುದಾಯಿಕ ಅಸಹಿಷ್ಣುತೆಗೆ ಪ್ರೇರಕವಾ
ವುದರಲ್ಲಿ ಅಚ್ಚರಿಯಿಲ್ಲ.

ಇದು ಗಂಭೀರ ಸಮಸ್ಯೆಯಾಗಿದೆ. ಏಕೆಂದರೆ, ನಮ್ಮ ಶಾಲಾ ಕಾಲೇಜುಗಳಲ್ಲಿ ತ
ತಲಾಂತರಗಳಿಂದ ಕಲಿಸಲಾಗುತ್ತಿರುವ ಭಾರತೀಯ ಇತಿಹಾಸಗಳು ಐರೋಪ್ಯ ಬರೆಹಗಾರ
ಕ್ರೋಢೀಕರಿಸಿದ್ದಾಗಿದೆ. ತಮ್ಮ ಐರೋಪ್ಯ ಗುರುಗಳು ತುರುಕಿಸಿದ ಪಕ್ಷಪಾತೀ ಕೃತಿಗಳನ
ಕಿತ್ತೊಗೆಯುವ ಭಾರತೀಯರ ಪ್ರಯತ್ನ ಈ ತನಕ ಯಶಸ್ವಿಯಾಗಿಲ್ಲ. ಅದೇ ವೇಳೆ
ಸ್ವಯಂಘೋಷಿತ ಇತಿಹಾಸಗಾರರು ರಾಷ್ಟ್ರೀಯ ಜೀವನವನ್ನು ಮಲಿನಗೊಳಿಸುವಂತಹ
ಅಳಿಸಲಾಗದ ಕಲೆಗಳನ್ನು ತಮ್ಮ ವಾಚಕರ ಮನದಲ್ಲಿ ಮೂಡಿಸುತ್ತಾರೆ. ಇವರು ಮುಖ್ಯವಾ
ಹಿಂದುಗಳ ಮತ್ತು ಮುಸ್ಲಿಮರ ಮಧ್ಯೆ ನಡೆದ ಆಕ್ರಮಣ, ಯುದ್ಧ, ಗಲಭೆ, ಬಲಾತ್ಕಾ
ಮತಭ್ರಾಂತಿಗಳನ್ನು ಚಿತ್ರಿಸಿ ತೋರಿಸುತ್ತಾರೆ. ಇವರು ಮುಸ್ಲಿಮರನ್ನು, ಹಿಂದೂ ಸಂಸ್ಕ
ಮತ್ತು ಆಚಾರವನ್ನು ನಾಶಪಡಿಸಿದವರು, ದುಷ್ಟರು, ವಿಗ್ರಹ ಭಂಜಕರು, ಹಿಂದುಗಳನ
ಬಲಾತ್ಕಾರವಾಗಿ ಮತಾಂತರಗೊಳಿಸಿದವರು, ನಿರಾಕರಿಸಿದವರನ್ನು ಖಡ್ಗದಿಂದ ಕೊಂದ
ರೆಂದು ಮುಂತಾಗಿ ಪ್ರಸ್ತುತಪಡಿಸುತ್ತಾರೆ.

ಭಾರತದ ವಿದ್ಯಾವಂತ ಜನರೂ ಈ ವಿಷಲಿಪ್ತ ಪ್ರಚಾರವನ್ನು ನಂಬಿ ಜೀವನದ ವಸಂತದಲ್ಲಿ ಪರಸ್ಪರ ವೈರ-ವಿದ್ವೇಷದಿಂದ ವೀಕ್ಷಿಸುತ್ತಿರುವುದು ಅಚ್ಚರಿದಾಯಕವಾಗಿದೆ. 800 ವರ್ಷಗಳಷ್ಟು ಸುದೀರ್ಘವಾದ ಭಾರತೇತಿಹಾಸದ ಮುಸ್ಲಿಮ್ ಕಾಲಘಟ್ಟವು ಒಂದು ಕರಾಳ ರಾತ್ರಿಯೆಂದು ಹಿಂದುಗಳನ್ನು ನಂಬಿಸಲಾಗಿದೆ. ಈ ಕಾಲಾವಧಿಯಲ್ಲಿ ಅಭಿಮಾನ ಪಡುವಂಥ ಯಾವುದೂ ಅವರಿಗೆ ಕಾಣಿಸುವುದಿಲ್ಲ. ಪಾಶ್ಚಾತ್ಯ ಕ್ರೈಸ್ತ ರಾಷ್ಟ್ರದ ಹಸ್ತಗಳಿಂದ ಅಧಿಕಾರ ಕಳೆದುಕೊಂಡ ಮುಸ್ಲಿಮರಾದರೋ ತಮ್ಮನ್ನು ಕೇವಲ ಆಕ್ರಮಣಕಾರಿಗಳೆಂದು ಹಿಂದುಗಳು ಚಿತ್ರಿಸುತ್ತಿರುವುದನ್ನು ಸಹಿಸಬೇಕಾಗುತ್ತದೆ. ತಮ್ಮ ಹಳೆಯ ಪ್ರತಾಪ, ಸಾಧನೆ ಮತ್ತು ಸಾಂಸ್ಕೃತಿಕ ಪ್ರಗತಿಯನ್ನು ನಿರ್ಲಕ್ಷಿಸುತ್ತಿರುವುದನ್ನು ಸಹಿಸದೆ ಅವುಗಳಲ್ಲಿ ಪ್ರತಿಷ್ಠೆಯ ಅಂಶಗಳನ್ನು ಗುರುತಿಸುತ್ತಾರೆ. ಈ ಭಾವನೆಗಳನ್ನು ಇತಿಹಾಸಗಾರರು ಹೇಗೆ ಶೋಷಿಸಿದರೆಂದು ಸರ್.ಎಚ್.ಎಮ್. ಈಲಿಯೆಟ್‌ರ 'ಸ್ವಂತ ಇತಿಹಾಸಗಾರರು ಹೇಳಿದ ಭಾರತದ ಚರಿತ್ರೆ' (History of India as told by its own Historians) ಎಂಬ ಗ್ರಂಥವು ಸ್ಪಷ್ಟಪಡಿಸುತ್ತದೆ. ಅದರ ಮುನ್ನುಡಿಯಲ್ಲಿ ಹೀಗೆ ಹೇಳಲಾಗಿದೆ.

"ನಾವು ರಾಜಂದಿರನ್ನು ನೋಡಿದೆವು... ಅವರು ಅಕ್ರಮಗಳಲ್ಲಿ ಮುಳುಗಿ ಹೋಗಿದ್ದಾರೆ. ಅಂಥ ಆಡಳಿತಗಾರರ ಅಧೀನದಲ್ಲಿ ನ್ಯಾಯದ ಬುನಾದಿಯೇ ಕುಸಿದು ಬಿದ್ದುದರಲ್ಲಿ ಅಚ್ಚರಿಯಿಲ್ಲ. ಭ್ರಷ್ಟಾಚಾರ ಎಲ್ಲೆಡೆ ವ್ಯಾಪಿಸಿತ್ತು. ಬಲಪ್ರಯೋಗಿಸದೆ ಕರ ವಸೂಲು ಮಾಡಲು ಸಾಧ್ಯವಿರಲಿಲ್ಲ. ಅಕ್ರಮಗಳು ತಾಂಡವವಾಡಿದುವು. ಗ್ರಾಮಗಳನ್ನು ಸುಟ್ಟು ಹಾಕಲಾಯಿತು. ಜನರನ್ನು ಹಿಂಸಿಸಿ ಗುಲಾಮಗೊಳಿಸಲಾಯಿತು. ಅವರಿಗೆ ಭದ್ರತೆ ಒದಗಿಸಬೇಕಾದ ಅಧಿಕಾರಿಗಳೇ ದರೋಡೆ ಮಾಡಿದರು. ದುಷ್ಟರನ್ನು ದಂಡಿಸುವ ಬದಲಾಗಿ ಜನ ಸಾಮಾನ್ಯರು ಅವರ ಅಕ್ರಮಗಳನ್ನು ಸಹಿಸಬೇಕಾಯಿತು.

ಈ ಪುಸ್ತಕದ ಇತರ ಕೆಲವು ವಾಕ್ಯಗಳನ್ನು ಗಮನಿಸಿರಿ- "ಮುಸ್ಲಿಮರೊಡನೆ ಸಂಘರ್ಷಿಸಿ ಹಿಂದುಗಳು ಹತರಾದರು. ವಿಗ್ರಹಗಳನ್ನು ಧ್ವಂಸಗೊಳಿಸಲಾಯಿತು. ಹಿಂದೂ ದೇವಾಲಯಗಳನ್ನು ಮಲಿನಗೊಳಿಸಿ ಬಲಾತ್ಕಾರದಿಂದ ಮತಾಂತರ ಮತ್ತು ವಿವಾಹಗಳನ್ನು ನೆರವೇರಿಸಲಾಯಿತು. ಅಕ್ರಮ ಸ್ವಾಧೀನ ಮತ್ತು ಜಪ್ತಿ ಹೆಚ್ಚಿತು. ಸಾಮೂಹಿಕ ಹತ್ಯೆಗಳೂ ನಡೆದುವು. ಇದು ಅತಿಶಯೋಕ್ತಿಯಲ್ಲ."

ಬ್ರಿಟಿಷರು ಒಡೆದು ಆಳುವ ತಂತ್ರವನ್ನು ಹೇಗೆ ರೂಪಿಸಿದರೆಂದು ಅವರ ಅಧಿಕೃತ ದಾಖಲೆಗಳಿಂದಲೇ ಗ್ರಹಿಸಬಹುದು. ಎಲ್ಫಿನ್ ದೊರೆಯ ರಾಜ್ಯ ಕಾರ್ಯದರ್ಶಿ ಹಿಂದೆ ಹೀಗೆ ಬರೆದಿದ್ದರು- "ಒಂದು ವಿಭಾಗವನ್ನು ಇನ್ನೊಂದು ವಿಭಾಗದ ವಿರುದ್ಧ ಕೆರಳಿಸಿ ಭಾರತದಲ್ಲಿ ನಮ್ಮ ಅಧಿಕಾರವನ್ನು ಭದ್ರಪಡಿಸಲಾಗುತ್ತಿದೆ. ಈ ನೀತಿಯನ್ನು ಕಾಯ್ದುಕೊಳ್ಳಬೇಕು. ಅದಕ್ಕಾಗಿ ಸಾಧ್ಯವಿರುವ ಎಲ್ಲ ಕ್ರಮಗಳನ್ನೂ ಕೈಗೊಳ್ಳಬೇಕು. ಅದರಿಂದ ಸಾಮೂಹಿಕ

ಭಾವನೆ ಬೆಳೆಯದಂತೆ ತಡೆಯಬಹುದು."

(ವುಡ್ ಪೇಪರ್ಸ್: ವುಡ್ ಟು ಎಲ್ಜಿನ್, ಮಾರ್ಚ್ 3, 1862

ಭಾರತದ ಕಾರ್ಯದರ್ಶಿ ಜೋರ್ಜ್ ಫ್ರಾನ್ಸಿಸ್ ಹೆಮಿಲ್ಟನ್, ಕರ್ಝನ್ ದೊರೆ ಹೀಗೆ ಬರೆದರು: "ನನ್ನ ಅಭಿಪ್ರಾಯದಲ್ಲಿ ಭಾರತದಲ್ಲಿ ನಮ್ಮ ಆಡಳಿತಕ್ಕೆ ಈಗ ಬೆದರಿ ಯಿಲ್ಲ- 50 ವರ್ಷಗಳ ಬಳಿಕ ಅದು ತೀವ್ರವಾಗಬಹುದು. ಅಷ್ಟರಲ್ಲಿ ಪಾಶ್ಚಾತ್ತ ತತ್ವಸಿದ್ಧಾಂತ ಮತ್ತು ಹೋರಾಟಗಳು ಪ್ರಬಲವಾಗುವುವು. ಆದ್ದರಿಂದ ತೀರಾ ಭಿನ್ನವಾ ವಿಚಾರ ಧಾರೆಗಳಲ್ಲಿ ಭಾರತದ ಬುದ್ಧಿಜೀವಿಗಳನ್ನು ನಾವು ಎರಡು ವಿಭಾಗಗಳಾ ಒಡೆಯಬೇಕು. ಹಾಗೆ ಮಾಡಿದರೆ ಮಾತ್ರ ನಮ್ಮ ಸ್ಥಾನವನ್ನು ಬಲಪಡಿಸಬಹುದು. ಶೈಕ್ಷಣಿ ಪ್ರಚಾರ ಮಾಧ್ಯಮಗಳಿಂದ ಹಾಗೆ ಮಾಡುವುದು ನಮ್ಮ ಆಡಳಿತ ನೀತಿಯಾಗಿರಬೇಕು ಶೈಕ್ಷಣಿಕ ರಂಗದಲ್ಲಿ ಪಾಠಪುಸ್ತಕಗಳ ಮೂಲಕ ಸಮುದಾಯಗಳನ್ನು ಒಡೆಯುವ ಯೋಜನೆಗಳನ್ನು ನಾವು ಸಮರ್ಥವಾಗಿ ಜಾರಿಗೊಳಿಸಬೇಕಾಗಿದೆ."

(ಹೆಮಿಲ್ಟನ್ ಟು ಕರ್ಝನ್, 26, ಮಾರ್ಚ್, 1888)

ಕ್ರಾಸ್, ರಾಜ್ಯಪಾಲ ಡಫ್ರಿನ್‌ನಿಗೆ ಹೀಗೆ ತಿಳಿಸಿದ್ದರು: "ಧಾರ್ಮಿಕ ಭಾವನೆಗಳನ್ನು ನೋಯಿಸುವ ನೀತಿಯು ನಮಗೆ ಬಹಳ ಉಪಯುಕ್ತವಾಗಿದೆ. ಭಾರತದ ಶಿಕ್ಷಣ ಮತ್ತು ಅಧ್ಯಯನ ವಿಷಯಗಳಿಗೆ ಸಂಬಂಧಪಟ್ಟ ನಿಮ್ಮ ಸಮೀಕ್ಷಾ ಮಂಡಳಿಯಿಂದಲೂ ಕೆಲವು ಅಂಶಗಳನ್ನು ನಾವು ನಿರೀಕ್ಷಿಸುತ್ತಿದ್ದೇವೆ."

(ಕ್ರೋಸ್ ಟು ಡಫ್ರಿನ್, 14, ಜನವರಿ 1887)

ಈ ರೀತಿಯ ಯೋಜಿತ ನೀತಿಯಿಂದ ಭಾರತದ ಇತಿಹಾಸ ಪಠ್ಯಪುಸ್ತಕಗಳನ್ನು ವಿಕೃತ ಗೊಳಿಸಲಾಯಿತು. ಮಧ್ಯಕಾಲೀನ ಭಾರತೇತಿಹಾಸದಲ್ಲಿ, ಮುಸ್ಲಿಮ್ ಆಡಳಿತಗಾರರು ಹಿಂದೂ ಪ್ರಜೆಗಳನ್ನು ಪೀಡಿಸಿದರು, ಮುಸ್ಲಿಮರ ಆಡಳಿತದಲ್ಲಿ ಹಿಂದುಗಳು ಅಸಹ್ಯ ಸಂಕಷ್ಟ ಗಳನ್ನು ಅನುಭವಿಸಬೇಕಾಯಿತು ಎಂಬ ಸುಳ್ಳುಗಳನ್ನು ತುರುಕಿಸಲಾಯಿತು. ಸಾಮಾಜಿಕ, ರಾಜಕೀಯ, ಆರ್ಥಿಕ ಜೀವನದಲ್ಲಿ ಯಾವುದೇ ಹೊಂದಾಣಿಕೆಯಿರಲಿಲ್ಲವೆಂದು ಪ್ರಚುರ ಪಡಿಸಲಾಗಿತ್ತು.

ಈ ಆರೋಪಗಳ ವಾಸ್ತವಿಕತೆಯನ್ನು ನಾವು ಗಂಭೀರವಾಗಿ ಪರಿಶೀಲಿಸಬೇಕಾಗಿದೆ. ಸಮಕಾಲೀನ ಮುಸ್ಲಿಮ್ ಇತಿಹಾಸಗಾರರು ಏನು ಹೇಳಿರುವರೆಂದು ನೋಡೋಣ.

ಖಾಝಿ ಮೊಯಿಝುದ್ದೀನ್ ಹೀಗೆ ವಿಶ್ಲೇಷಿಸಿದ್ದಾರೆ: "ಮಧ್ಯಕಾಲೀನ ಶತಮಾನ ದಲ್ಲಿ ಭಾರತದ ರಾಷ್ಟ್ರನಾಯಕನು ಮುಸ್ಲಿಮನಾಗಿದ್ದರೂ ರಾಷ್ಟ್ರವು ಇಸ್ಲಾಮ್ ನಿಷ್ಠವಾಗಿರಲಿಲ್ಲ. ಪವಿತ್ರ ಗ್ರಂಥಗಳಾದ ಕುರ್‌ಆನ್ ಮತ್ತು ಹದೀಸ್‌ಗಳ ಆಜ್ಞಾನಿರ್ದೇಶಗಳನ್ನಾಗಲಿ, ಸುನ್ನೀ ನ್ಯಾಯಶಾಸ್ತ್ರದ ನಾಲ್ಕು ವಿಧದ ಅಧ್ಯಯನಗಳಲ್ಲಿರುವ ಕಾನೂನನ್ನಾಗಲಿ ರಾಷ್ಟ್ರವು ಪಾಲಿಸುತ್ತಿ

ರಲಿಲ್ಲ. ಮಧ್ಯಕಾಲೀನ ಭಾರತ ದೇಶವು ಧರ್ಮಾಧಿಷ್ಠಿತವಾಗಿತ್ತೆನ್ನುವುದು ತಪ್ಪು. ಏಕೆಂದರೆ, ಮುಸ್ಲಿಮ್ ಧರ್ಮ ವಿದ್ವಾಂಸರ ಮಾರ್ಗದರ್ಶನದಂತೆ ಅದು ಕಾರ್ಯ ನಿರ್ವಹಿಸುತ್ತಿರಲಿಲ್ಲ."

13ನೆಯ ಶತಮಾನದಿಂದೀಚೆಗಿನ ಭಾರತದ ಪ್ರತಿಯೊಬ್ಬ ಮುಸ್ಲಿಮ್ ರಾಜನೂ ಶರೀಅತ್ ಬದ್ಧ ಆಡಳಿತ ವ್ಯವಸ್ಥೆಯ ಕ್ಲಿಷ್ಟತೆ ಮತ್ತು ಅಸಾಧ್ಯತೆಗಳ ಬಗ್ಗೆಯೇ ಹೇಳುತ್ತಿದ್ದರು. ಅಲಮಿಷ್, ಬಾಲ್ಬನ್, ಅಲಾವುದ್ದೀನ್ ಖಿಲ್ಜಿ, ಮುಹಮ್ಮದ್ ತುಗ್ಲಕ್ ಮುಂತಾದ ಮೊಗಲರಿಗಿಂತ ಹಿಂದಿನ ರಾಜರು ಮುಸ್ಲಿಮ್ ಕಾನೂನುಗಳನ್ನು ಭಾರತದಲ್ಲಿ ಜಾರಿಗೊಳಿಸುವ ಔಚಿತ್ಯವನ್ನು ಪ್ರಶ್ನಿಸಿದ್ದರು. ಇತಿಹಾಸಗಾರ ಝಿಯಾವುದ್ದೀನ್ ಬರ್ನಿಯವರು ತಮ್ಮ 'ಫತಾವಾ ಫಹಂದರಿ'ಯಲ್ಲಿ ಹೇಳುತ್ತಾರೆ:

"ಪ್ರವಾದಿಯವರ ಹೆಜ್ಜೆಗಳನ್ನು ಅನುಗಮಿಸುವುದೇ ನೈಜ ಧರ್ಮವಾಗಿದೆ. ಆದರೆ, ಅರಸೊತ್ತಿಗೆಗಳಿಗೆ ಕುಸ್ರು, ಫರ್ವಾರ್ಝ್ ಮತ್ತು ಇರಾನ್‌ನ ಮಹಾ ರಾಜರ ನೀತಿಗಳನ್ನು ಮಾತ್ರ ಪಾಲಿಸಲು ಸಾಧ್ಯವಿತ್ತು." "ಪ್ರವಾದಿ ಮುಹಮ್ಮದ್‌ರ(ಸ) ಸಂಪ್ರದಾಯ (ಸುನ್ನತ್) ಮತ್ತು ಜೀವನ ವಿಧಾನಕ್ಕೂ ಇರಾನ್ ರಾಜಂದಿರ ಆಚಾರ ಮತ್ತು ಜೀವನ ವಿಧಾನಕ್ಕೂ ಬಹಳಷ್ಟು ಅಂತರವಿದೆ" ಎಂದು ಅವರು ಒಪ್ಪಿಕೊಂಡಿದ್ದಾರೆ.

ಝಿಯಾವುದ್ದೀನ್ ಮುಂದೆ ಹೀಗೆಂದಿದ್ದಾರೆ: "ದೇವಾಜ್ಞೆಯಾಗಿರುವ ಶರೀಅತನ್ನು ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ರಾಜಕೀಯ ವ್ಯವಹಾರಗಳಲ್ಲಿ ಅವಲಂಬಿಸಬೇಕಾಗಿದೆ. ಪ್ರವಾದಿ ಮುಹಮ್ಮದ್‌ರಿಗೆ ಅಲ್ಲಾಹನ ನೇರ ಪ್ರೇರಣೆಯಿದ್ದುದರಿಂದ ಶರೀಅತ್‌ನ ಜಾರಿಯಲ್ಲಿ ಅವರು ಯಶಸ್ವಿಯಾದರು. ಪ್ರವಾದಿಯವರೊಂದಿಗಿನ ಒಡನಾಟದಿಂದ ನಾಲ್ವರು ಖಲೀಫರಿಗೂ ಅದು ಸಾಧ್ಯವಾಯಿತು. ಪ್ರವಾದಿತ್ವವು ಧರ್ಮದ ಪರಿಪೂರ್ಣತೆಯಾಗಿದ್ದರೂ ರಾಜಾಧಿಕಾರವು ಕೇವಲ ಭೌತಿಕ ಸಾಧನೆಯಾಗಿದ್ದಿತು. ಈ ಎರಡು ಗುಣವೈಶಿಷ್ಟ್ಯಗಳು ಪರಸ್ಪರ ವಿರುದ್ಧವಾಗಿದ್ದುವು. ಅವುಗಳ ಸಂಯೋಜನೆಯು ವ್ಯಾವಹಾರಿಕವಾಗಿರಲಿಲ್ಲ.

ನಾಝಿಮುದ್ದೀನ್ ಹೀಗೆ ಬರೆದಿದ್ದಾರೆ: "ಬಾಲ್ಬನನು ಆಡಳಿತ ವ್ಯವಹಾರಗಳಲ್ಲಿ ಧರ್ಮಕ್ಕಿಂತ ಸಂಪ್ರದಾಯಗಳಿಗೆ ಹೆಚ್ಚು ಆದ್ಯತೆ ನೀಡಿದ್ದನು."

**(ತಬ್‌ಕಾತೆ ಅಕ್ಬರಿ, ಸಂಪುಟ:1, ಪುಟ:82)**

ಬರ್ನಿ ಹೇಳಿದ್ದಾರೆ: "ಆತನು ಶಿಕ್ಷೆ ಮತ್ತು ರಾಜಾಧಿಕಾರದ ವಿಷಯದಲ್ಲಿ ದೇವನಿಗೆ ಹೆದರದೆ ವ್ಯವಹರಿಸಿದನು. ಸರಕಾರಕ್ಕೆ ಹಿತವೆಂದು ತೋಚಿದ ಎಲ್ಲವನ್ನೂ ಆತನು ಮಾಡಿದನು. ಅವು ಶರೀಅತ್‌ಗೆ ಬದ್ಧವಾಗಿವೆಯೇ ವಿರುದ್ಧವಾಗಿವೆಯೇ ಎಂಬುದನ್ನು ಆತ ಲೆಕ್ಕಿಸಲಿಲ್ಲ." ಕಾಝಿ ಮೊಯಿಝುದ್ದೀನ್ ಮತ್ತು ಅಲಾವುದ್ದೀನ್ ಖಿಲ್ಜಿಯವರ ವಾದ ಪ್ರತಿವಾದ ಖ್ಯಾತವಾಗಿದೆಯಷ್ಟೆ. ಕೊನೆಗೆ ಅವರು ಹೀಗೆ ಹೇಳಿ ಮುಗಿಸಿದ್ದರು: "ಸಮಯೋಚಿತ ಮತ್ತು

ಸರಕಾರಕ್ಕೆ ಹಿತವೆಂದು ಮನಗಂಡ ಎಲ್ಲವನ್ನೂ ನಾನು ಆಜ್ಞಾಪಿಸುತ್ತೇನೆ. ಅಂತ್ಯ ದಿನದಲ್ಲಿ ಸರ್ವೋನ್ನತನಾದ ದೇವನು ನನ್ನನ್ನು ಹೇಗೆ ಪರಿಗಣಿಸುವನೆಂದು ತಿಳಿದಿಲ್ಲ."

(ತಾರೀಖೆ ಷಾಹಿ)

ಪ್ರೊ। ಎಮ್.ಹಬೀಬ್ ಹೀಗೆ ಹೇಳಿದ್ದಾರೆ: "ವಿದೇಶಗಳಿಂದ ಬಂದ ಮುಸ್ಲಿಮ್ ರಾಜರು ಆರೇಳು ಶತಮಾನಗಳ ಕಾಲ ಭಾರತದ ಸಿಂಹಾಸನದಲ್ಲಿ ಕುಳಿತಿದ್ದರೆಂಬುದು ನಿಜ. ಆದರೆ, ಅವರ ಆರೋಹಣವು ಮುಸ್ಲಿಮ್ ಆಡಳಿತದ ಸಿಂಹಾಸನದಲ್ಲಾಗಿರಲಿಲ್ಲ. ಹಾಗಿರುತ್ತಿದ್ದರೆ ಅವರು ಒಂದು ಪೀಳಿಗೆಯ ಕಾಲವೂ ಉಳಿಯುತ್ತಿರಲಿಲ್ಲ."

(ಮಿಡಿವಲ್ ಇಂಡಿಯಾ, ಕ್ವಾಟರ್ಲಿ ಪುಟ:5)

ಇನ್ನು, ಇತಿಹಾಸದ ವಾಸ್ತವಿಕತೆಗಳನ್ನು ಹೇಗೆ ತಿರುಚಲಾಯಿತೆಂಬುದನ್ನು ಸೂಚಿಸುವ ಕೆಲವು ಉದಾಹರಣೆಗಳನ್ನು ತಿಳಿಸುತ್ತೇನೆ:

1928ರಲ್ಲಿ ನಾನು ಅಲಹಾಬಾದ್‌ನಲ್ಲಿ ಟಿಪ್ಪುಸುಲ್ತಾನನ ಬಗ್ಗೆ ಸಂಶೋಧನೆ ನಡೆಸುತ್ತಿದ್ದಾಗ ಆಂಗ್ಲೋ-ಬಂಗಾಳಿ ಕಾಲೇಜಿನ ವಿದ್ಯಾರ್ಥಿ ಸಂಘದ ಕೆಲವು ಪದಾಧಿಕಾರಿಗಳು ನನ್ನ ಸಂದರ್ಶನಕ್ಕೆ ಬಂದರು. ಅವರ ಇತಿಹಾಸ ಮಂಡಳಿಯನ್ನು ಉದ್ಘಾಟಿಸಬೇಕೆಂದೂ ವಿನಂತಿಸಿದರು. ಪಠ್ಯಪುಸ್ತಕಗಳನ್ನು ಕೈಯಲ್ಲಿ ಹಿಡಿದು ಕಾಲೇಜಿನಿಂದ ನೇರವಾಗಿ ಅವರು ಬಂದಿದ್ದರು: ಸಂದರ್ಭವಶಾತ್, ನಾನು ಅವರ ಇತಿಹಾಸ ಪಾಠ ಪುಸ್ತಕಗಳನ್ನು ಒಮ್ಮೆ ಅವಲೋಕಿಸಿದೆ. ಅದರ ಒಂದು ವಾಕ್ಯವು ನನ್ನನ್ನು ಬೆಚ್ಚಿಬೀಳಿಸಿತು: "ಮೂರು ಸಾವಿರ ಬ್ರಾಹ್ಮಣರನ್ನು ಟಿಪ್ಪು ಸುಲ್ತಾನ್ ಬಲಾತ್ಕಾರದಿಂದ ಇಸ್ಲಾಮಿಗೆ ಮತಾಂತರಿಸಲು ನಿರ್ಬಂಧಿಸಿದಾಗ ಅವರು ಆತ್ಮಹತ್ಯೆ ಮಾಡಿಕೊಂಡರು." ಆ ಪುಸ್ತಕವನ್ನು ಕಲ್ಕತ್ತಾ ವಾರ್ಸಿಟಿಯ ಸಂಸ್ಕೃತ ವಿಭಾಗದ ವಿದ್ವಾನ್ ಮಹಾ ಮಹೋಪಾಧ್ಯಾಯ ಡಾ। ಹರಿಪ್ರಸಾದ್ ಶಾಸ್ತ್ರಿಯವರು ಬರೆದಿದ್ದರು. ಆ ಕೂಡಲೇ ನಾನು ಈ ಮಾಹಿತಿ ಎಲ್ಲಿಂದ ದೊರೆಯಿತೆಂದು ವಿಚಾರಿಸಿ ಡಾ। ಶಾಸ್ತ್ರಿಯವರಿಗೆ ಪತ್ರ ಬರೆದೆ. ಹಲವು ಬಾರಿ ತಿಳಿಸಿದ ಬಳಿಕ ಉತ್ತರ ಬಂತು. ಮೈಸೂರು ಗಝೇಟ್‌ನಲ್ಲಿ ಅವರಿಗೆ ಆ ಮಾಹಿತಿ ಲಭಿಸಿತ್ತಂತೆ. ಮೈಸೂರು ಗಝೇಟ್, ಅಲಹಾಬಾದ್ ಅಥವಾ ಕಲ್ಕತ್ತಾದ ಇಂಪೀರಿಯಲ್ ಲೈಬ್ರೆರಿಯಲ್ಲಿ ಲಭ್ಯವಿರಲಿಲ್ಲ, ಆದ್ದರಿಂದ ನಾನು ಶಾಸ್ತ್ರಿಯವರ ಹೇಳಿಕೆಯ ನಿಜಸ್ಥಿತಿಯನ್ನು ವಿಚಾರಿಸಿ ಮೈಸೂರು ವಾರ್ಸಿಟಿಯ ಅಂದಿನ ವೈಸ್ ಛಾನ್ಸಲರ್ ಸರ್ ಬ್ರಜೇಂದ್ರನಾಥ್‌ರಿಗೆ ಪತ್ರ ಬರೆದೆ. ಅವರು ಆ ಪತ್ರವನ್ನು, ಮೈಸೂರು ಗಝೆಟಿನ ಹೊಸ ಆವೃತ್ತಿಯ ತಯಾರಿಯಲ್ಲಿ ನಿರತರಾಗಿದ್ದ ಪ್ರೊ। ಶ್ರೀಕಂಠಯ್ಯನವರಿಗೆ ರವಾನಿಸಿದರು.

ಪ್ರೊ। ಶ್ರೀ ಕಂಠಯ್ಯನವರು, 3,000 ಬ್ರಾಹ್ಮಣರು ಆತ್ಮಹತ್ಯೆ ಮಾಡಿಕೊಂಡ ಕಥೆ ಮೈಸೂರು ಗಝೆಟಿನಲ್ಲಿ ಇಲ್ಲವೆಂದು ನನಗೆ ತಿಳಿಸಿದರು. ಮೈಸೂರು ಇತಿಹಾಸದ ವಿದ್ಯಾರ್ಥಿಯೆಂಬ ನೆಲೆಯಲ್ಲಿ, ಅಂತಹ ಘಟನೆ ನಡೆದಿಲ್ಲವೆಂದು ಖಚಿತವಾಗಿ ಹೇಳಬಹುದಾಗಿದೆ

ಂದೂ ಅವರು ಒತ್ತಿ ಹೇಳಿದರು. ಅನಂತರ ಅವರು, ಟಿಪ್ಪು ಸುಲ್ತಾನ್‌ನ ಪ್ರಧಾನಿ
ಾಗಿದ್ದ ಪೂರ್ಣಯ್ಯ ಮತ್ತು ದಂಡಾಧಿಕಾರಿ ಕೃಷ್ಣ ರಾವ್‌ರು ಬ್ರಾಹ್ಮಣರೆಂದೂ ತಿಳಿಸಿದ್ದರು.
ಪ್ಪು ವಾರ್ಷಿಕ ಧನಸಹಾಯ ನೀಡುತ್ತಿದ್ದ 156 ಹಿಂದೂ ಕ್ಷೇತ್ರಗಳ ಯಾದಿಯನ್ನು ಅವರು
ನಗೆ ಕಳುಹಿಸಿ ಕೊಟ್ಟರು. ಟಿಪ್ಪು ಸುಲ್ತಾನ್‌ರೊಂದಿಗೆ ಸೌಹಾರ್ದ ಸಂಬಂಧ ಹೊಂದಿದ್ದ
ಂಗೇರಿಯ ಜಗದ್ಗುರು ಶಂಕರಾಚಾರ್ಯರಿಗೆ ಟಿಪ್ಪು ಸುಲ್ತಾನ್ ಕಳುಹಿಸಿದ್ದ 30 ಪತ್ರಗಳ
ೋಟೋ ಪ್ರತಿಗಳನ್ನು ಅವರು ನನಗೆ ಕಳುಹಿಸಿದರು. ಮೈಸೂರು ರಾಜರ ಪರಂಪರೆ
ುಂತೆ ಟಿಪ್ಪುಸುಲ್ತಾನ್‌ರು ಪ್ರತಿದಿನ ಬೆಳಗ್ಗಿನ ಉಪಹಾರಕ್ಕಿಂತ ಮುಂಚೆ ಶ್ರೀರಂಗ ಪಟ್ಟಣದ
ೋಟೆಯೊಳಗಿರುವ ಶ್ರೀರಂಗನಾಥ ದೇವಾಲಯವನ್ನು ಸಂದರ್ಶಿಸುತ್ತಿದ್ದರು. ಡಾ। ಶಾಸ್ತ್ರಿ
ುವರು, ಕರ್ನಲ್ ಮೈಲ್ಸ್‌ನ ಸ್ವಯಂ ಘೋಷಿತ 'ಮೈಸೂರು ಇತಿಹಾಸ' ಎಂಬ ಪುಸ್ತಕ
ನ್ನು ಅವಲಂಬಿಸಿರಬಹುದೆಂದೂ ಪ್ರೊ। ಶ್ರೀಕಂಠಯ್ಯ ಅಭಿಪ್ರಾಯ ಪಟ್ಟಿದ್ದರು. ಇದು
ಕ್ಟೋರಿಯಾ ರಾಣಿಯ ಖಾಸಗಿ ಲೈಬ್ರೆರಿಯಲ್ಲಿ ದೊರೆತ 'ಟಿಪ್ಪು ಸುಲ್ತಾನ್' ಎಂಬ
ರ್ಶಿಯನ್ ಹಸ್ತ ಪ್ರತಿಯ ಅನುವಾದವೆಂದೂ ವಾದಿಸಲಾಗಿತ್ತು. ಆ ಬಗ್ಗೆ ವಿಶೇಷ ಶೋಧ
ಡೆಸಿದಾಗ, ವಿಕ್ಟೋರಿಯಾ ರಾಣಿಯ ಲೈಬ್ರೆರಿಯಲ್ಲಿ ಅಂಥ ಹಸ್ತ ಪ್ರತಿಯಿಲ್ಲ, ಕರ್ನಲ್
ಮೈಲ್ಸ್‌ರ ಇತಿಹಾಸ ಪುಸ್ತಕದಲ್ಲಿರುವ ಹೆಚ್ಚಿನ ವಿವರಗಳು ಕಟ್ಟು ಕಥೆ ಮತ್ತು ಹಸಿ ಸುಳ್ಳೆಂದು
ವ್ಯಕ್ತವಾಯಿತು.

ಡಾ। ಶಾಸ್ತ್ರಿಯವರ ಪುಸ್ತಕವನ್ನು ಬಂಗಾಳ, ಅಸ್ಸಾಮ್, ಬಿಹಾರ, ಒರಿಸ್ಸಾ, ಉತ್ತರ ಪ್ರದೇಶ, ಮಧ್ಯಪ್ರದೇಶ ಮತ್ತು ರಾಜಸ್ಥಾನಗಳಲ್ಲಿ ಹೈಸ್ಕೂಲು ಮಟ್ಟದ ಇತಿಹಾಸ ಪಠ್ಯವಾಗಿ ಅಂಗೀಕರಿಸಲಾಗಿತ್ತು. ನಾನು ಅಂದಿನ ಕಲ್ಕತ್ತಾ ವಾರ್ಸಿಟಿಯ ವೈಸ್ ಛಾನ್ಸಲರ್ ಅಷ್ಟೋಸ್ ಚೌಧರಿಯವರನ್ನು ಸಂಪರ್ಕಿಸಿ, ಡಾ। ಶಾಸ್ತ್ರಿ, ಮೈಸೂರು ವಾರ್ಸಿಟಿಯ ವೈಸ್ ಛಾನ್ಸಲರ್ ಸರ್ ಬ್ರಜೇಂದ್ರನಾಥ್ ಸೀಲ್ ಮತ್ತು ಪ್ರೊ। ಶ್ರೀಕಂಠಯ್ಯನವರೊಡನೆ ನಡೆಸಿದ ಪತ್ರ ವ್ಯವಹಾರಗಳನ್ನು ಅವರಿಗೆ ರವಾನಿಸಿದೆ. ಪಾಠಪುಸ್ತಕದಲ್ಲಿರುವ ಆಕ್ಷೇಪಾರ್ಹ ವಿವರಣೆಯ ವಿರುದ್ಧ ಅವಶ್ಯಕ ಕ್ರಮಕೈಗೊಳ್ಳಬೇಕೆಂದೂ ವಿನಂತಿಸಿದೆ. ಡಾ। ಎಚ್.ವಿ. ಶಾಸ್ತ್ರಿಯವರ ಇತಿಹಾಸ ಪುಸ್ತಕವನ್ನು ಪಠ್ಯಪದ್ಧತಿಯಿಂದ ಕೈಬಿಟ್ಟಿರುವುದಾಗಿ ಸರ್. ಅಷ್ಟೋಸ್ ಚೌಧರಿಯವರು ನನಗೆ ಕೂಡಲೇ ಉತ್ತರ ಬರೆದರು.

ಆದರೆ, 1972ರಲ್ಲಿ ಉತ್ತರ ಪ್ರದೇಶದ ಹೈಸ್ಕೂಲಿನ 6,7,8ನೇ ತರಗತಿಗಳಿಗೆ ಸಿದ್ಧಪಡಿಸಿದ ಇತಿಹಾಸ ಪುಸ್ತಕಗಳಲ್ಲಿ ಈ ಆತ್ಮಹತ್ಯೆಯ ಕಥೆ ನೋಡಿ ನಾನು ದಂಗಾದೆ.

ಗಾಂಧೀಜಿಯವರ 'ಯಂಗ್ ಇಂಡಿಯಾ' 1930ರ ಜನವರಿ 23ರ ಸಂಚಿಕೆಯ 31ನೆಯ ಪುಟದಲ್ಲಿ ಹೀಗೆ ಪ್ರಕಟಿಸಲಾಗಿತ್ತು: "ವಿದೇಶ ಇತಿಹಾಸಕಾರರು ಮೈಸೂರಿನ ಟಿಪ್ಪು ಸುಲ್ತಾನನನ್ನು ಮತಭ್ರಾಂತ, ಹಿಂದೂ ಪ್ರಜೆಗಳನ್ನು ಮರ್ದಿಸಿ ಇಸ್ಲಾಮ್ ಧರ್ಮ

ಸ್ವೀಕರಿಸುವಂತೆ ಬಲಾತ್ಕಾರಿಸಿದವನೆಂದು ಚಿತ್ರಿಸಿದ್ದಾರೆ. ಆದರೆ, ಅವರು ಹಾಗಿರಲೀ ಬದಲಾಗಿ ಹಿಂದೂ ಪ್ರಜೆಗಳೊಡನೆ ಅವರ ಸಂಬಂಧವು ಬಹಳ ಸೌಹಾರ್ದಮಂ ವಾಗಿತ್ತು. ಮೈಸೂರು ಸಂಸ್ಥಾನದ ಪ್ರಾಚ್ಯವಸ್ತು ಇಲಾಖೆಯಲ್ಲಿ ಟಿಪ್ಪು ಸುಲ್ತಾನ್ ಶೃಂಗೇರಿ ಮಠದ ಶಂಕರಾಚಾರ್ಯರಿಗೆ ಬರೆದ ಸುಮಾರು 30 ಪತ್ರಗಳಿವೆ. ಆ ಪೈಕಿ ಒಂದ ಪತ್ರವನ್ನು 1793ರಲ್ಲಿ ಬರೆಯಲಾಗಿತ್ತು. (ಟಿಪ್ಪುವಿಗೆ ಶಂಕರಾಚಾರ್ಯರು ಕಳುಹಿಸಿದ ಪ ತಲಪಿದೆಯೆಂದೂ ಅದರಲ್ಲಿ ತಿಳಿಸಲಾಗಿದೆ. ಅದರಲ್ಲಿ ಶಂಕರಾಚಾರ್ಯರೊಡನೆ ವಿ ಕಲ್ಯಾಣದಂತೆಯೇ ದೇಶ ಕಲ್ಯಾಣಕ್ಕಾಗಿಯೂ ಪ್ರಾರ್ಥಿಸುವಂತೆ ವಿನಂತಿಸಲಾಗಿದೆ. ಅವರನ ಮೈಸೂರಿಗೆ ಆಮಂತ್ರಿಸಿ ದೇಶದಲ್ಲಿ ಸಜ್ಜನರ ಸಾನ್ನಿಧ್ಯವು ಮಳೆ-ಬೆಳೆ ವೃದ್ಧಿಗೆ ಸಹಾಯ ವೆಂದು ಹೇಳಲಾಗಿದೆ.) ಅದು ಭಾರತೇತಿಹಾಸದಲ್ಲಿ ಸ್ವರ್ಣಾಕ್ಷರಗಳಲ್ಲಿ ಬರೆದಿಡಬೇಕಾ ಪತ್ರವಾಗಿದೆ. ಅನೇಕ ಸಂಸ್ಕೃತ ಪದಗಳಿರುವ ಆ ಪತ್ರದ ಕೆಲವು ವಾಕ್ಯಗಳನ್ನು ಯಥಾವತ್ತಾ ಉಲ್ಲೇಖಿಸುತ್ತೇನೆ.

ಶ್ರೀ ಮದ್‌ಪರಮಹಂಸ ತೀರ್ಥ ಬಿರುದಾಂಕಿತ ಶೃಂಗೇರಿ ಶ್ರೀ ಸಚ್ಚಿದಾನಂದ ಭಾರ ಸ್ವಾಮಿಯವರಿಗೆ, ಟಿಪ್ಪುಸುಲ್ತಾನ್ ಬಾದಷಾರ ತಾಳೆಬರಹ*-

"ನೀವು ಕಳುಹಿಸಿದ ಪತ್ರದಿಂದ ಸಕಲ ಅಭಿಲಾಷೆಯು ತಿಳಿಯಲಾಯಿತು. ತಾ ಜಗದ್ಗುರುಗಳು ಸರ್ವಲೋಕ ಸುಖ ಕ್ಷೇಮ ಆಗಬೇಕು. ಜನರು ಸ್ವಾಸ್ಥದಲ್ಲಿ ಇ ಬೇಕೆಂಬುದಾಗಿ ತಪಸ್ಸು ಮಾಡುತ್ತಲೇ ಇದ್ದೀರಿ. ಸರಕಾರದ ಕ್ಷೇಮವೂ ಉತ್ತರೋತ್ತ ಅಭಿವೃದ್ಧಿಯೂ ಆಗುವಂತೆ ತ್ರಿಕಾಲ ತಪಸ್ಸು ಮಾಡುವಲ್ಲಿಯೂ ಈಶ್ವರ ಪ್ರಾರ್ಥ ಮಾಡುತ್ತಾ ಬರುವುದು ತಮ್ಮಂತಹ ದೊಡ್ಡವರು ಯಾವ ದೇಶದಲ್ಲಿ ಇದ್ದಾರೆಯೋ ಆ ದೇಶಕ್ಕೆ ಮಳೆ-ಬೆಳೆ ಸಕಲವೂ ಆಗಿ ಸುಭಿಕ್ಷವಾಗಿ ಇರತಕ್ಕದಾದ್ದರಿಂದ ಪರಸ್ಥಳದಲ್ಲಿ ಬಹ ದಿವಸ ತಾವು ಯಾತಕ್ಕೆ ಇರಬೇಕು. ಹೋದ ಕೆಲಸವನ್ನು ಬೇಗನೆ ಅನುಕೂಲಪಡಿಸಿಕೊಂಡು ಸ್ಥಳಕ್ಕೆ ಸಾಗಿಬರುವಂತೆ ಮಾಡಿಸುವುದು, (ತಾರೀಕು 21 ಮಾರಹರಾಜಿಸಾಲ್ ಸಹರ್ಸನ 1220 ಮುಹಮ್ಮದ್) ಪರಿಂಧಾವಿ ಸಂವತ್ಸರದ ಮಾಘ ಬಹುಳ 14 ಲುಖಿತ್ ಸುಬಾಯಿ ಮುನ್ನಿಹಸೂರ್.

ಹಿಂದೂ ಕ್ಷೇತ್ರಗಳಿಗೆ ಟಿಪ್ಪುವು ಭಾರೀ ಪ್ರಮಾಣದಲ್ಲಿ ಜಮೀನು ದಾನ ಮಾಡಿದ್ದನು. ಟಿಪ್ಪುವಿನ ಅರಮನೆಗಳಿಗೆ ಅಭಿಮುಖವಾಗಿರುವ ಶ್ರೀ ವೆಂಕಟರಮಣ, ಶ್ರೀನಿವಾಸ, ಶ್ರೀರಂಗನಾಥ ಮುಂತಾದ ಕ್ಷೇತ್ರಗಳು ಆ ಮಹಾನುಭಾವನ ಸಹಿಷ್ಣುತೆ ಮತ್ತು ವಿಶಾಲ ಮನೋಭಾವದ ಅವಿಸ್ಮರಣೀಯ ಸ್ಮಾರಕಗಳಾಗಿವೆ. ಅಲ್ಲಾಹನ ಭಕ್ತನಾಗಿದ್ದ ಆ ಮಹಾನ್ ಹುತಾತ್ಮನಿಗೆ- ಅವರು ಸ್ವಾತಂತ್ರ್ಯದ ಹುತಾತ್ಮರಾಗಿದ್ದರು- ಹಿಂದೂ ಕ್ಷೇತ್ರಗಳ ಘಂಟಾ

---

* ಮೂಲ ಗ್ರಂಥದಲ್ಲಿ ಈ ವಾಕ್ಯಗಳು ದೇವನಾಗರಿ ಲಿಪಿಯಲ್ಲಿ ಪ್ರಕಟವಾಗಿದೆ.

ನಾದವು ತನ್ನ ಪ್ರಾರ್ಥನೆಗಳಿಗೆ ಅಡ್ಡಿಯೆನಿಸಿರಲಿಲ್ಲ. ಟಿಪ್ಪು, ಸ್ವಾತಂತ್ರ್ಯಕ್ಕಾಗಿ ಕಾದಾಡಿ ಹತರಾದರು. ವೈರಿಗಳಿಗೆ ಶರಣಾಗಬೇಕೆಂಬ ಆದೇಶವನ್ನು ಅವರು ತುಚ್ಛೀಕರಿಸಿದರು. ಅನೇಕ ಅಜ್ಞಾತ ಸೈನಿಕರ ಮಧ್ಯೆ ಅವರ ಮೃತದೇಹ ಪತ್ತೆಯಾಯಿತು. ಆ ಹತಭಾಗ್ಯರೊಂದಿಗೆ ಅವರು ಅಭಿಮಾನದಿಂದ ಭಾಗಿಯಾಗಿದ್ದರು. ಮರಣದಲ್ಲಿಯೂ ಅವರು ತನ್ನ ಕೈಯನ್ನು ಖಡ್ಗದ ಹಿಡಿಯಿಂದ ಬಿಟ್ಟಿರಲಿಲ್ಲ. ಅದು ಸ್ವಾತಂತ್ರ್ಯದ ಘೋಷಣೆಯೊಂದಿಗೆ ಎತ್ತಿ ಹಿಡಿದ ಅಸ್ತ್ರವಾಗಿತ್ತು. ಟಿಪ್ಪುವಿನ ಮಾತುಗಳನ್ನು ಜ್ಞಾಪಿಸಿರಿ:

"200 ವರ್ಷ ನಾಯಿಯಂತೆ ಬಾಳುವುದಕ್ಕಿಂತ ಎರಡು ದಿನ ಸಿಂಹದಂತೆ ಬಾಳುವುದು ಉತ್ತಮ."

ಅವರ ಗೌರವಾರ್ಥ ರಚಿಸಿದ ಶೋಕಗೀತೆಯ ತುಣುಕನ್ನು ನೆನಪಿಸುತ್ತೇನೆ. "ಅಲ್ಲಾಹನೇ! ಹೀನ ಮತ್ತು ಅಪಮಾನಿತನಾಗಿ ಬಾಳುವುದಕ್ಕಿಂತ ನಮ್ಮ ತಲೆಯಿಂದ ರಕ್ತ ಸುರಿಸುತ್ತಾ ರಣರಂಗದಲ್ಲಿ ಸಾಯುವುದು ಉತ್ತಮ."

ಇದೇ ರೀತಿ ನಾನು ಅಲಹಾಬಾದ್ ಮುನ್ಸಿಪಲ್ ಚೆಯರ್‌ಮನ್ ಆಗಿದ್ದಾಗ (1948-58) ಒಂದು ವಿವಾದ ನನ್ನ ಬಳಿಗೆ ಬಂತು. ಸೋಮೇಶ್ವರನಾಥ ಮಹಾದೇವಾಲಯಕ್ಕೆ ದಾನ ನೀಡಿದ ಸೊತ್ತಿನ ಬಗ್ಗೆ ವಿವಾದವುಂಟಾಗಿತ್ತು. ಮಹಂತರ ನಿಧನದ ಬಳಿಕ ಇಬ್ಬರು ವಾರೀಸುದಾರರು ಮುಂದೆ ಬಂದರು. ಹಕ್ಕುದಾರರಲ್ಲೊಬ್ಬರು ಕುಟುಂಬದ ವಶವಿದ್ದ ಕೆಲವು ದಾಖಲೆಗಳನ್ನು ಸಲ್ಲಿಸಿದರು. ಅದು ಔರಂಗಝೇಬ್ ಚಕ್ರವರ್ತಿ ನೀಡಿದ ಆಜ್ಞೆಯಾಗಿತ್ತು. ಔರಂಗಝೇಬ್, ಜಮೀನು ಮತ್ತು ಹಣವನ್ನು ದೇವಾಲಯಕ್ಕೆ ನೀಡಿದ ದಸ್ತಾವೇಜು. ನನಗೆ ಅಚ್ಚರಿಯಾಯಿತು. ಈ ದಾಖಲೆಗಳು ಕೃತಕವಾಗಿರಬಹುದೇ ಎಂಬ ಸಂಶಯವೂ ಮೂಡಿತು. ದೇವಾಲಯ ಧ್ವಂಸಕನೆಂದು ಚಿತ್ರಿಸಲಾಗುವ ಔರಂಗಝೇಬನು, "ಈ ಜಮೀನನ್ನು ಪೂಜೆ ಹೋಮಾದಿಗಳಿಗಾಗಿಯೆಂದು" ತಿಳಿಸಿ ಯಾಕೆ ದಾನ ನೀಡಿದ? ಔರಂಗಝೇಬ್ ವಿಗ್ರಹ ಪ್ರೇಮಿಯಾಗುವುದಾದರೂ ಹೇಗೆ?

ಈ ದಾಖಲೆಗಳು ಸುಳ್ಳೆಂದು ನನಗೆ ಖಚಿತವಿತ್ತು. ಆದರೂ ಆ ಬಗ್ಗೆ ತೀರ್ಮಾನ ಕೈಗೊಳ್ಳುವುದಕ್ಕಿಂತ ಮುಂಚೆ ಪರ್ಶಿಯನ್ ಮತ್ತು ಅರಬಿ ಭಾಷಾ ಪಂಡಿತರಾಗಿದ್ದ ಡಾ। ಸರ್‌ತೇಜ್ ಬಹದೂರ್ ಸಪ್ರುರವರ ಅಭಿಪ್ರಾಯ ತಿಳಿಯಲು ನಿರ್ಧರಿಸಿದೆ. ದಾಖಲೆಗಳನ್ನು ಪರಿಶೀಲಿಸಿದ ಡಾ। ಸಪ್ರು, ಔರಂಗಝೇಬರ ಫರ್ಮಾನು ಇರುವ ಈ ದಾಖಲೆ ನಿಜವೆಂದು ಹೇಳಿದರು. ತರುವಾಯ ಅವರು ತನ್ನ ಗುಮಾಸ್ತನಿಗೆ, ವಾರಣಾಸಿಯ ಜಂಗಂಬಾಡಿ ಶಿವಕ್ಷೇತ್ರದ ದಾವೆಯ ದಾಖಲೆ ಪತ್ರಗಳನ್ನು ತರುವಂತೆ ತಿಳಿಸಿದರು. ಅಲಹಾಬಾದ್ ಹೈಕೋರ್ಟ್‌ನಲ್ಲಿ ಈ ಕುರಿತು ಅನೇಕ ದೂರುಗಳು ತನಿಖೆಯಾಗದೆ ಮೂಲೆ ಸೇರಿವೆ. ಜಂಗಂಬಾಡಿ ಕ್ಷೇತ್ರದ ಮಹಂತರ ಬಳಿಯಲ್ಲಿಯೂ ಕ್ಷೇತ್ರಕ್ಕೆ ಔರಂಗಝೇಬ್

ಜಮೀನು ನೀಡಿ ಆಜ್ಞೆ ಹೊರಡಿಸಿದ ಹಲವು ಸಾಕ್ಷ್ಯಾಧಾರಗಳಿವೆ.

ಇದು ಔರಂಗಜ಼ೇಬ್‌ನ ಕುರಿತು ನನಗೆ ಹೊಸ ಮಾಹಿತಿ ಒದಗಿಸಿತು. ಡಾ। ಸಪ್ರು ಸಲಹೆಯನ್ವಯ ಭಾರತದ ಹಲವು ಪ್ರಮುಖ ದೇವಾಲಯಗಳಿಗೆ ಪತ್ರ ಬರೆದೆ. ಅವ ಬಳಿ ದೇವಾಲಯಕ್ಕೆ ಔರಂಗಜ಼ೇಬನು ಭೂಮಿ ದಾನಮಾಡಿದ ಆಜ್ಞೆಗಳಿದ್ದರೆ ಅವು ಛಾಯಾ ಪ್ರತಿಯನ್ನು ಕಳುಹಿಸಿಕೊಡುವಂತೆ ವಿನಂತಿಸಿದೆ. ಅದರ ಸಂಗ್ರಹಣೆಯು ಇನ್ನೊಂ ಅದ್ಭುತವಾಗಿತ್ತು. ಮಹಾ ಕಾಳೇಶ್ವರ, ಉಜ್ಜೈನಿಯ ಬಾಲಾಜಿಕ್ಷೇತ್ರ, ಚಿತ್ರಕೂಟ, ಉಮಾನಂ ಕ್ಷೇತ್ರ ಮತ್ತು ಗೌಹಟಿ ಮುಂತಾದ ಪ್ರಧಾನ ಕ್ಷೇತ್ರಗಳಿಂದಲೂ ಶತ್ರುಂಜದ ಜೈನ ಬಸ ಯಿಂದಲೂ ನನಗೆ ಔರಂಗಜ಼ೇಬ್ ಹೊರಡಿಸಿದ್ದ ಆಜ್ಞೆಗಳ ಪ್ರತಿಗಳು ದೊರೆತುವು. ಅಲ್ಲ ಉತ್ತರ ಭಾರತದ ಇತರ ಕೆಲವು ಕ್ಷೇತ್ರಗಳಿಂದಲೂ ಗುರುದ್ವಾರಗಳಿಂದಲೂ ಇಂತ ಪ್ರತಿಗಳು ಬಂದುವು. ಈ ಎಲ್ಲ ಆಜ್ಞೆಗಳು ಹಿಜರಿ 1065 ರಿಂದ (1659) 1091ರ (168 ಅವಧಿಯದ್ದಾಗಿದ್ದುವು.

ಇವೆಲ್ಲವೂ ಹಿಂದುಗಳು ಮತ್ತು ಅವರ ದೇವಾಲಯಗಳ ಬಗ್ಗೆ ಔರಂಗಜ಼ೇಬ ವಿಶಾಲ ಮನೋಭಾವದ ಕೆಲವಾರು ಉದಾಹರಣೆಗಳಾಗಿವೆ. ಇತಿಹಾಸಕಾರರು ಅವ ಕುರಿತು ಬರೆದಿರುವುದೆಲ್ಲವೂ ಸುಳ್ಳು ಮತ್ತು ಚಿತ್ರದ ಒಂದು ಮುಖ ಮಾತ್ರವೆಂದು ಸ್ಪ ಪಡಿಸುವ ಇತರ ಅನೇಕ ಆಧಾರಗಳಿವೆ. ಭಾರತವು ಸಹಸ್ರಾರು ದೇವಾಲಯಗಳಿರು ಬಹುದೊಡ್ಡ ದೇಶವಾಗಿದೆ. ಪ್ರಾಮಾಣಿಕವಾಗಿ ಸಂಶೋಧನೆ ನಡೆಸಿದರೆ ಔರಂಗಜ಼ೇಬನ ಮುಸ್ಲಿಮೇತರರಿಗೆ ಮಾಡಿದ ಉಪಕಾರಗಳನ್ನು ಸ್ಪಷ್ಟಪಡಿಸುವ ಅನೇಕ ವಿಷಯಗಳ ಬಹಿರಂಗವಾಗುವುದರಲ್ಲಿ ಸಂದೇಹವಿಲ್ಲ.

ಔರಂಗಜ಼ೇಬನ ಫರ್ಮಾನುಗಳ ಸಂಶೋಧನೆಯ ವೇಳೆ ಪಾಟ್ನಾ ವಸ ಸಂಗ್ರಹಾಲಯದ ಮಾಜಿ ಉದ್ಯೋಗಿಯಾಗಿದ್ದ ಶ್ರೀ ಜ್ಞಾನ ಚಂದ್ರ, ಡಾ। ಪಿ.ಎಲ್.ಗುಪ ಎಂಬವರ ಪರಿಚಯವಾಯಿತು. ಅವರೀರ್ವರೂ ಔರಂಗಜ಼ೇಬನ ಇತಿಹಾಸದ ಸಂಶೋಧ ನಡೆಸುತ್ತಿದ್ದರು. ಇತರ ಕೆಲವು ಸಂಶೋಧಕರೂ ಔರಂಗಜ಼ೇಬನ ಮಲಿನಗೊಳಿಸಲಾ ಚಿತ್ರವನ್ನು ಶುಚಿಗೊಳಿಸಲು ಪ್ರಯತ್ನಿಸುತ್ತಿರುವುದನ್ನು ನೋಡಿ ನನಗೆ ಸಂತೃಪ್ತಿಯಾಯಿತು ಕಪಟ ಇತಿಹಾಸಕಾರರು ಔರಂಗಜ಼ೇಬನ ವಿಕೃತ ಚರಿತ್ರೆಯನ್ನು ಭಾರತದ ಮುಸ್ಲಿಮ ಆಳ್ವಿಕೆಯ ಪ್ರತೀಕವೆಂದು ಚಿತ್ರಿಸುತ್ತಿದ್ದಾರೆ.

ಔರಂಗಜ಼ೇಬನನ್ನು ಹಿಂದೂ ವಿರೋಧಿ ಚಕ್ರವರ್ತಿಯೆಂದು ಚಿತ್ರಿಸುವಾಗಲೂ 'ಬನಾರಸ್ ದಾಖಲೆ'ಯೆಂದು ಖ್ಯಾತವಾದ ಒಂದು ಕಡತದ ಬಗ್ಗೆ ಹೇಳಬೇಕಾಗುತ್ತದೆ. ಈ ದಾಖಲೆಯು ಗೌರಿ ಮೊಹಲ್ಲದಲ್ಲಿ ವಾಸವಾಗಿರುವ ವಾರಣಾಸಿಯ (ಬನಾರಸ್) ಒಂದು ಬ್ರಾಹ್ಮಣ ಕುಟುಂಬಕ್ಕೆ ಸೇರಿದೆ. 1905ರಲ್ಲಿ ಗೋಪಿ ಉಪಾಧ್ಯಾಯರ ಮಗಳ ಪುತ್ರನಾದ

ಮಂಗಳವಾಡೆ ಈ ಕಡತವನ್ನು ಜಿಲ್ಲಾ ಮೆಜಿಸ್ಟ್ರೇಟರಿಗೆ ಹಾಜರುಪಡಿಸಿದರು. ಇದು ಅನೇಕ ಪಂಡಿತರ ಗಮನ ಸೆಳೆಯಿತು. 1911ರಲ್ಲಿ ಅದು ಬಂಗಾಳೀಯರ ಏಶ್ಯಾಟಿಕ್ ಸೊಸೈಟಿಯ ನಿಯತ ಕಾಲಿಕದಲ್ಲಿ ಮೊದಲ ಬಾರಿ ಪ್ರಕಟವಾಯಿತು. ಆ ಬಳಿಕ ಹಲವು ಇತಿಹಾಸಗಾರರು ಆ ದಾಖಲೆಯನ್ನು ಉದ್ಧರಿಸುತ್ತಿದ್ದಾರೆ. ಈ ಆಜ್ಞೆಯ ವಾಸ್ತವಿಕಾಂಶವನ್ನು ಗ್ರಹಿಸದೆ ಅವರು ಔರಂಗಝೇಬನು ದೇವಾಲಯ ನಿರ್ಮಾಣಕ್ಕೆ ಅಡ್ಡಿಯುಂಟು ಮಾಡಿದನೆಂದು ಆರೋಪಿಸುತ್ತಾರೆ. (ಹಿಸ್ಟರಿ ಓಫ್ ಔರಂಗಝೇಬ್- ಜದುನಾಥ್ ಸರ್ಕಾರ್)

ಔರಂಗಝೇಬನ ಈ ಆಜ್ಞೆಯನ್ನು, ಹಿಜರಿ 1065ರ ಜುಮಾದಿಲ್ ಅವ್ವಲ್ 15ರಂದು (ಮಾರ್ಚ್ 10, 1659) ದೇವಾಲಯ ಪರಿಪಾಲಕರಾದ ಕೆಲವು ಬ್ರಾಹ್ಮಣರು ಪೀಡನೆಯ ಬಗ್ಗೆ ನೀಡಿದ ದೂರಿನ ಹಿನ್ನೆಲೆಯಲ್ಲಿ ಬನಾರಸ್‌ನ ಸ್ಥಾನೀಯ ಅಧಿಕಾರಿಗಳಿಗೆ ಕಳುಹಿಸ ಲಾಗಿತ್ತು. ಅದರಲ್ಲಿ ಹೀಗೆ ಹೇಳಲಾಗಿದೆ:

"ನಮ್ಮ ಅರಸೊತ್ತಿಗೆಯ ಔದಾರ್ಯ ಮತ್ತು ನಂಬಿಕೆಗೆ ಅಬುಲ್ ಹಸನ್ ಅರ್ಹರಾಗಿದ್ದಾರೆ. ಆದರೆ, ನೈಸರ್ಗಿಕ ಔದಾರ್ಯವಾಗಿರುವ ನಮ್ಮ ಸಂಪನ್ಮೂಲಗಳು ಕೋಮು ಪಕ್ಷಪಾತವಿಲ್ಲದೆ ಎಲ್ಲ ವಿಭಾಗದವರ ಕಲ್ಯಾಣಕ್ಕಾಗಿದೆಯೆಂದು ಅವರು ತಿಳಿದಿರಲಿ. ನಮ್ಮ ಪಾವನ ಕಾನೂನಿನನ್ವಯ ಯಾವೊಂದು ಪ್ರಾಚೀನ ದೇವಾಲಯಗಳನ್ನೂ ನಾಶಪಡಿಸ ಬಾರದೆಂದು ನಾವು ನಿರ್ಣಯಿಸಿದ್ದೇವೆ. ಹೊಸತು ನಿರ್ಮಿಸುವುದೂ ಬೇಡ.

ನ್ಯಾಯ ಪಾಲನೆಯಾಗುತ್ತಿರುವ ಈ ದಿನಗಳಲ್ಲಿಯೂ ಬನಾರಸ್ ಮತ್ತು ಪರಿಸರ ಪ್ರದೇಶದ ಹಿಂದುಗಳನ್ನು ಕೆಲವರು ಪೀಡಿಸುತ್ತಿರುವರೆಂದು ದರ್ಬಾರಿಗೆ ಸುದ್ದಿ ಬಂದಿದೆ. ಈ ಪ್ರಾಚೀನ ದೇವಾಲಯಗಳ ಪರಿಪಾಲಕರು ಮತ್ತು ಹೊಣೆಗಾರರಾಗಿರುವ ಬ್ರಾಹ್ಮಣರನ್ನು ಆ ಪೌರಾಣಿಕ ಸ್ಥಾನದಿಂದ ಉಚ್ಚಾಟಿಸುವ ಕೆಲವು ಪ್ರಯತ್ನಗಳು ನಡೆದಿವೆ. ಬ್ರಾಹ್ಮಣರ ಮೇಲಿನ ಈ ಹಸ್ತಕ್ಷೇಪವು ಆ ಸಮುದಾಯವನ್ನು ಅಸ್ವಸ್ಥಗೊಳಿಸಿದೆ.

ಆದ್ದರಿಂದ, ನಮ್ಮ ರಾಜಾಜ್ಞೆಯೇನೆಂದರೆ, ಈ ಉಜ್ವಲ ಆಜ್ಞೆ ತಲಪಿದ ಕೂಡಲೇ ಇನ್ನು ಮುಂದೆ ಆ ಪ್ರದೇಶದ ಬ್ರಾಹ್ಮಣ ಅಥವಾ ಇತರ ಹಿಂದುಗಳನ್ನು ಪೀಡಿಸಬಾರದು, ಅವರ ವ್ಯವಹಾರಗಳಲ್ಲಿ ಹಸ್ತಕ್ಷೇಪ ನಡೆಸಬಾರದೆಂದು ನೀವು ಆದೇಶಿಸಬೇಕು. ಆ ಮೂಲಕ ಅವರಿಗೆ ನೆಮ್ಮದಿಯಿಂದ ಹಿಂದಿನ ಕೆಲಸಗಳನ್ನು ನಿರ್ವಹಿಸುತ್ತಾ ದೇವದತ್ತವಾದ ಈ ಸಾಮ್ರಾಜ್ಯದ ಶಾಶ್ವತ ಉಳಿವಿಗಾಗಿ ಪ್ರಾರ್ಥಿಸಲು ಸಾಧ್ಯವಾಗಬಹುದು. ಈ ಆಜ್ಞೆಯನ್ನು ತುರ್ತಿನದ್ದೆಂದು ಪರಿಗಣಿಸಬೇಕು."

ಈ ಆಜ್ಞೆಯಿಂದ ನಮಗೆ ತಿಳಿಯುವುದೇನೆಂದರೆ, ಔರಂಗಝೇಬನು ಯಾವುದಾದರೂ ಹೊಸ ದೇವಾಲಯದ ನಿರ್ಮಾಣದ ವಿರುದ್ಧ ಹೊಸ ಫರ್ಮಾನು ಹೊರಡಿಸಲಿಲ್ಲ, ಜಾರಿಯಲ್ಲಿರುವ ಕಾನೂನೊಂದನ್ನು ಸೂಚಿಸಿ, ಅದನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದಷ್ಟೇ

ಸೂಚಿಸಿದ್ದನು. ಹಾಲೀ ದೇವಾಲಯಗಳನ್ನು ನಾಶಪಡಿಸುವುದಕ್ಕೆ ಆತ ಸಂಪೂರ್ಣ ವಿರುದ್ಧ ವಾಗಿದ್ದನು. ತನ್ನ ಹಿಂದೂ ಪ್ರಜೆಗಳು ಶಾಂತಿಯಿಂದ ಬಾಳಬೇಕೆಂಬ ಕಳಕಳಿಯನ್ನೂ ಆತನು ಈ ಆಜ್ಞೆಯಲ್ಲಿ ಸ್ಪಷ್ಟಪಡಿಸಿದ್ದನು.

ಅದೇ ಪ್ರಕಾರ ಹಿಂದೂ ಪ್ರಜೆಗಳು ಶಾಂತಿಯಿಂದ ಬಾಳಬೇಕೆಂಬ ಔರಂಗಝೇಬನ ಕಳಕಳಿಯನ್ನು ಸೂಚಿಸುವ ಇನ್ನೊಂದು ಬನಾರಸ್ ಆಜ್ಞೆ ಹೀಗಿದೆ: "ಈ ಶುಭ ಸಂದರ್ಭ ದಲ್ಲಿ ಹೊರಡಿಸುವ ವಿಶೇಷಾಜ್ಞೆಯೇನೆಂದರೆ, ಮಹಾರಾಜಾಧಿರಾಜ ರಾಮ್‌ಸಿಂಗ್ ಈ ಪವಿತ್ರ ರಾಜದರ್ಬಾರಿನಲ್ಲಿ ನಿವೇದಿಸಿಕೊಂಡಿರುವಂತೆ, ಅವರ ತಂದೆಯು ತಮ್ಮ ಗುರು ವರ್ಯರಾದ ಭಗವತ್ ಗೋಸ್‌ರ ವಾಸಕ್ಕಾಗಿ ಬನಾರಸ್‌ನ ಮಧೋರಮ್ ಮೊಹಲ್ಲದಲ್ಲಿ ಯಮುನಾ ತೀರದಲ್ಲಿ ಕಟ್ಟಿಸಿದ ಮಂದಿರದಲ್ಲಿ ಅವರನ್ನು ಕೆಲವರು ಪೀಡಿಸುತ್ತಿರುವರೆಂದು ತಿಳಿದುಬಂದಿದೆ. ನಮ್ಮ ರಾಜಾಜ್ಞೆಯೇನೆಂದರೆ ಈ ಮಹಾನ್ ಆಜ್ಞೆ ದೊರೆತ ಕೂಡಲೇ ಹಾಲೀ ಮತ್ತು ಭಾವೀ ಅಧಿಕಾರಿಗಳಿಗೆ ಆದೇಶಿಸುವುದೇನೆಂದರೆ ಯಾವ ಕಾರಣಕ್ಕೂ ಯಾರೊಬ್ಬರೂ ಅವರಿಗೆ ತೊಂದರೆ ಕೊಡಬಾರದು, ಅವರ ವ್ಯವಹಾರಗಳಲ್ಲಿ ಹಸ್ತಕ್ಷೇಪ ನಡೆಸಬಾರದು. ಆ ಮೂಲಕ ಅವರು ದೇವದತ್ತವಾದ ಈ ಸಾಮ್ರಾಜ್ಯದ ಉಳಿವಿಗಾಗಿ ಪ್ರಾರ್ಥಿಸುತ್ತಿರಲಿ. ಇದನ್ನು ತುರ್ತು ಕಾರ್ಯವೆಂದು ಪರಿಗಣಿಸಲಿ. ರಬೀವುಲ್ ಆಖಿರ್, ತಾರೀಕು 17, ಹಿಜರಿ 1091"

(ಶ್ರೀ ಗ್ಯಾನ್ ಚಂದ್ರರಿಗೆ ಪಾಕಿಸ್ತಾನದ ಆರ್ಕೆವಿಡ್ ಡೈರೆಕ್ಟರ್ ಎಸ್.ಎಮ್. ಜಾಫರ್ ತಿಳಿಸಿದ್ದು)

ಜಂಗಂಬಾಡಿ ಮಠದ ಮಹಂತರ ವಶವಿರುವ ಆಜ್ಞೆಗಳನ್ವಯ ಔರಂಗಝೇಬನು ತನ್ನ ಪ್ರಜೆಗಳಿಗಾಗುವ- ಅದು ಹಿಂದುವಾಗಿರಲಿ ಯಾ ಮುಸ್ಲಿಮರಾಗಿರಲಿ- ಅಕ್ರಮ ಅನ್ಯಾಯಗಳನ್ನು ಸಹಿಸುತ್ತಿರಲಿಲ್ಲವೆಂದು ವ್ಯಕ್ತವಾಗುತ್ತದೆ. ಅಪರಾಧಿಗಳನ್ನು ಆತ ಕಠಿಣವಾಗಿ ದಂಡಿಸುತ್ತಿದ್ದ. ಇಂತಹ ಇನ್ನೊಂದು ಆಜ್ಞೆಯಲ್ಲಿ, ಔರಂಗಝೇಬನ ಆಸ್ಥಾನದಲ್ಲಿ ಜಂಗಮ ಸಮುದಾಯದವರು, ಬನಾರಸ್‌ನಲ್ಲಿ ವಾಸವಾಗಿದ್ದ ನಾಸಿರ್ ಬೇಗ್ ಎಂಬ ಮುಸ್ಲಿಮನ ವಿರುದ್ಧ ನೀಡಿದ ದೂರಿನ ಬಗ್ಗೆ ಹೇಳಲಾಗಿದೆ. ಆ ಕುರಿತು ರಾಜಶಾಸನ ಹೀಗಿದೆ:

"ಸೂಬಾ ಅಲಹಾಬಾದ್‌ನ ಬನಾರಸ್ ಎಂದು ಖ್ಯಾತವಾಗಿರುವ ಹವೇಲಿ ಮುಹಮ್ಮದಾಬಿನ ಅಧಿಕಾರಿಯ ಗಮನಕ್ಕೆ- ಪರಗಣ ಬನಾರಸ್ ವಾಸಿಗಳಾದ ಅರ್ಜುನ್ ಮಾಲ್ ಮತ್ತು ಜಂಗಮರು ಚಕ್ರವರ್ತಿಗೆ ಸಮರ್ಪಿಸಿರುವ ದೂರಿನಂತೆ, ಕಸ್ಬಾ ಬನಾರಸ್ ನಲ್ಲಿ ಅವರ ಸ್ವಾಧೀನವಿರುವ 5 ಸ್ಥಳಗಳನ್ನು ಬನಾರಸ್ ನಿವಾಸಿ ನಾಸಿರ್ ಬೇಗ್ ಬಲಾತ್ಕಾರ ದಿಂದ ವಶಪಡಿಸಿಕೊಂಡಿದ್ದಾರೆ. ಈ ದೂರಿನಲ್ಲಿ ಸತ್ಯಾಂಶವಿದ್ದರೆ, ನಾಸಿರ್ ಬೇಗ್‌ನನ್ನು ಅಲ್ಲಿಗೆ ಪ್ರವೇಶಿಸಲು ಬಿಡಬಾರದು. ಅಂತೆಯೇ ಮುಂದೆ ಜಂಗಮರು ಈ ಬಗ್ಗೆ ನಮಗೆ ದೂರು ನೀಡುವ ಅವಕಾಶವಾಗದಂತೆ ಎಚ್ಚರ ವಹಿಸಬೇಕು." ಆಜ್ಞೆಯ ತಾರೀಕು 11,

ಶಲಿಬಾನ್ ಸಾನ್ 13 ಜುಲೂಸ್ (1672 ಕ್ರಿ.ಶ.)
**(ಹೈಕೋರ್ಟಿನ ಕಡತಗಳು. ಅಲಹಾಬಾದ್ ಹೈಕೋರ್ಟ್‌ನಲ್ಲಿ ಕೃಷ್ಣಗಿರಿ ಮತ್ತಿತರರು ಜಗದ್ಗುರು ಶ್ರೀ ಮಹಂತ ಮಾಲಿಕ್ ಅರ್ಜುನ್ ಸ್ವಾಮಿಯವರ ವಿರುದ್ಧ 1984ರಲ್ಲಿ ಸಲ್ಲಿಸಿದ ದೂರು. ಎಕ್ಸಿಬಿಟ್-20)**

ಇದೇ ಮಠದವರ ಬಳಿಯಿರುವ ಇನ್ನೊಂದು ದಾಖಲೆಯಲ್ಲಿ (ತಾರೀಕು, 1 ರಬೀವುಲ್ ಅವ್ವಲ್ 1078) ಜಂಗಮರಿಗೆ ಅನುಮತಿಸಿದ ಭೂಮಿಯನ್ನು ವಿತರಿಸುವಂತೆ ಆಜ್ಞಾಪಿಸಲಾಗಿದೆ. ಅದು ಹೀಗಿದೆ: ಸೂಬಾ ಅಲಹಾಬಾದಿಗೆ ಸೇರಿದ ಹವೇಲಿ ಬನಾರಸ್ ಪರಗಣದ ಈಗಿನ ಮತ್ತು ಮುಂದಿನ ಉದ್ಯೋಗಿಗಳ ಗಮನಕ್ಕೆ-9 ಅಮರ್ದಾದ್ ಇಲಾಹಿ ತಾರೀಕಿನ ರಾಜಾಜ್ಞೆಯನ್ವಯ 178 ಬಿಘ ಜಮೀನನ್ನು ಜಂಗಮ ಸಮುದಾಯದವರಿಗೆ ಅವರ ಆದಾಯ ಮೂಲವಾಗಿ ಅನುಮತಿಸಲಾಗಿತ್ತು. ಹಳೆಯ ಅಧಿಕಾರಿಗಳು ಈ ವಿಷಯ ವನ್ನು ಹಿಂದೆ ಪರಿಶೀಲಿಸಿದ್ದರು. ಈಗ ಪರಗಣದ ಸರದಾರನ (ಮಲಿಕ್) ಮುದ್ರೆ ಹಾಕಿ ಸಲ್ಲಿಸಿರುವ ದಾಖಲೆ ಪತ್ರಗಳಿಂದಲೂ ಹಿಂದಿನ ಕಾಲದಿಂದಲೇ ಈ ಜಮೀನು ಅವರ ವಶವಿದ್ದಿತೆಂದು ವ್ಯಕ್ತವಾಗುತ್ತದೆ. ಆದ್ದರಿಂದ ಚಕ್ರವರ್ತಿಯ ಆಜ್ಞಾನುಸಾರ ಅದು ಅವರಿಗೆ ಕಾಣಿಕೆ (ನಿಸಾರ್)ಯಾಗಿ ಸೇರಬೇಕಾಗಿದೆ. ಈ ಜಮೀನನ್ನು ಸನ್ 10ರ ಖಾರಿಫ್ ಬೆಳೆಗಿಂತ ಮುಂಚಿತವಾಗಿ ಅವರಿಗೆ, ಹಿಂದಿನ ಸ್ಥಿತಿಯಲ್ಲಿಯೇ ಮರಳಿಸಬೇಕು. ಈ ವಿಷಯದಲ್ಲಿ ಯಾರೂ ಹಸ್ತಕ್ಷೇಪ ನಡೆಸಬಾರದು. ಆ ಮೂಲಕ ಜಂಗಮ ಸಮುದಾಯವು ಪ್ರತಿ ಯೊಂದು ಧಾನ್ಯದ ಆದಾಯವನ್ನೂ ಚಕ್ರವರ್ತಿಯ ಈ ನಾಡಿನಲ್ಲಿ ಅವರ ಪರಿಪಾಲನೆಗಾಗಿ ಬಳಸಲಿ. ಇದರಲ್ಲಿ ಲೋಪವುಂಟು ಮಾಡಬಾರದು." (Ibid, ಎಕ್ಸಿಬಿಟ್ ನಂಬ್ರ-11)

ಈ ಆಜ್ಞೆಯು ಅವರ ನ್ಯಾಯ ಪ್ರಜ್ಞೆಯನ್ನು ಮಾತ್ರವಲ್ಲ, ಹಿಂದು ಭಿಕ್ಷುಗಳಿಗೆ ಕಾಣಿಕೆ (ನಿಸಾರ್) ನೀಡುವುದರಲ್ಲಿ ಪಕ್ಷಪಾತ ತೋರಿಸುತ್ತಿರಲಿಲ್ಲವೆಂದೂ ವ್ಯಕ್ತಪಡಿಸುತ್ತದೆ. ಮೇಲೆ ಹೇಳಿದ 178 ಬಿಘ ಜಮೀನನ್ನು ಜಂಗಮ ಸಮುದಾಯದವರಿಗೆ ಬಹುವಂಶ ಔರಂಗಝೇಬನೇ ಕೊಡುಗೆ ನೀಡಿದ್ದೆಂದು ಭಾವಿಸಬೇಕಾಗಿದೆ. ಹಿಜರಿ 1071ರ ರಮಝಾನ್ 5ರಂದು ಹೊರಡಿಸಿದ ಆಜ್ಞೆಯೊಂದರಲ್ಲಿ ಪ್ರಸ್ತುತ ಜಮೀನಿನ ಕುರಿತು ಹೀಗೆ ಪ್ರಸ್ತಾವಿಸ ಲಾಗಿದೆ:

"ಸೂಬಾ ಅಲಹಾಬಾದ್‌ನ ಉಪವಲಯವಾಗಿರುವ ಬನಾರಸ್‌ನ ಪರಗಣ ಹವೇಲಿಯ ಈಗಿನ ಮತ್ತು ಮುಂದಿನ ಅಧಿಕಾರಿಗಳ ಗಮನಕ್ಕೆ, ಚಕ್ರವರ್ತಿ ಆಜ್ಞೆಯನ್ವಯ ಪರಗಣ ಬನಾರಸ್‌ನ 178 ಬಿಘ ಜಮೀನನ್ನು ಜಂಗಮ ಸಮುದಾಯದವರ ಪರಿಪಾಲನೆಯ ಖರ್ಚಿಗಾಗಿ ನೀಡಲಾಗಿದೆ. ಈ ಹಿಂದೆ ಚಕ್ರವರ್ತಿಯ ದರ್ಬಾರಿಗೆ, ಜಂಗಮರು ಆಗಮಿಸಿದ್ದರು. ಅವರ ಹಕ್ಕುಗಳನ್ನು ಅಂಗೀಕರಿಸಲಾಗಿತ್ತು. ಅದೇ ಜನರು ಬದುಕಿದ್ದಾರೆ.

ಅವರು ಜಮೀನಿನ ಅನುಭೋಗಿಗಳಾಗಿದ್ದಾರೆ. ಆದ್ದರಿಂದ ಅದೇ ಜಮೀನನ್ನು ಅವರಿಗೆ ಚಕ್ರವರ್ತಿಯ ಕಾಣಿಕೆಯಾಗಿ ಈ ಹಿಂದೆ ನೀಡಿದಂತೆ ಪುನಃ ನೀಡಲಾಗುತ್ತಿದೆ. ಈ ಭೂಮಿಯನ್ನು 'ದಾನಭೂಮಿ (ಮುಫ್)'ಯಾಗಿ ಪರಿಗಣಿಸಬೇಕು. ಹಾಗೆಯೇ ಅವರು ಅದನ್ನು ಅನುಭೋಗಿಸುತ್ತಾ ಅಲ್ಲಿಯೇ ಚಕ್ರವರ್ತಿಯ ಸಾಮ್ರಾಜ್ಯದ ಉಳಿವಿಗಾಗಿ ಪ್ರಾರ್ಥಿಸುತ್ತಿರಬಹುದು."
**(Ibid, ಎಕ್ಸಿ ಬಿಟ್ ನಂಬ್ರ-16)**

ಓರ್ವ ಹಿಂದೂ ಧರ್ಮ ಪ್ರಚಾರಕನಿಗೆ ಹಿಜರಿ 1098ರಲ್ಲಿ ಔರಂಗಝೇಬನು ಬನಾರಸ್ ನಗರದಲ್ಲಿ ಜಮೀನು ನೀಡಿದ ವಿವರಣೆ ಹೀಗಿದೆ: "ಈ ಶುಭ ಮುಹೂರ್ತದಲ್ಲಿ ಹೊರಡಿಸುವ ಆಜ್ಞೆಯೇನೆಂದರೆ ಬನಾರಸ್‌ನ ಯಮುನಾ ತೀರದ ಬನಿಮಾಂಡ ಘಾಟ್‌ನಲ್ಲಿ 588 ಬಿಘ ವಿಸ್ತೀರ್ಣದ ಎರಡು ಖಾಲಿ ಸ್ಥಳಗಳಿವೆ. (ಒಂದು ಸ್ಥಳವು ರಾಮ್‌ಜೀವನ್‌ರ ಮನೆಯ ಮುಂದೆ ಮಸೀದಿಯ ಹಿಂಬದಿಯಲ್ಲಿ, ಇನ್ನೊಂದು ಸ್ಥಳವು ಅದರ ಸ್ವಲ್ಪ ಮೇಲ್ಭಾಗದಲ್ಲಿದೆ.) ಅದು ಬೈತುಲ್‌ಮಾಲ್‌ಗೆ (ಸಾರ್ವಜನಿಕ ಬೊಕ್ಕಸ) ಸೇರಿದೆ. ಅವುಗಳನ್ನು ನಾವು ರಾಮ್‌ಜೀವನ್ ಮತ್ತು ಅವರ ಪುತ್ರನಿಗೆ ದಾನ ನೀಡುತ್ತೇವೆ. ಹಾಗೆಯೇ ಅಲ್ಲಿ ಭಕ್ತರಾದ ಬ್ರಾಹ್ಮಣರು ಮತ್ತು ಸಾಧುಗಳಿಗಾಗಿ ಭವನಗಳನ್ನು ನಿರ್ಮಿಸಿ, ಪ್ರಾರ್ಥನಾ ನಿರತರಾಗಿ ದೇವದತ್ತವಾದ ಈ ಸಾಮ್ರಾಜ್ಯದ ಉಳಿವಿಗಾಗಿ ಏರ್ಪಾಡು ಮಾಡಲಿ. ಈ ಆಜ್ಞೆಯನ್ನು ಕಾಪಾಡಬೇಕಾದುದು ನಮ್ಮ ಮಕ್ಕಳು, ಮಂತ್ರಿಗಳು, ಸರದಾರರು, ಹಿರಿಯ ಅಧಿಕಾರಿಗಳು ಮತ್ತು ಈಗಿನ ಹಾಗೂ ಮುಂದಿನ ಕೊತವಾಲರ ಕರ್ತವ್ಯವಾಗಿದೆ. ಪ್ರಸ್ತುತ ಜಮೀನುಗಳನ್ನು ಅನುಭೋಗದಾರರ ಸುಪುರ್ದಿನಲ್ಲಿ ಉಳಿಸಿ, ಎಲ್ಲ ದೇಣಿಗೆ ಮತ್ತು ತೆರಿಗೆಗಳಿಂದ ಮುಕ್ತಗೊಳಿಸಬೇಕು. ವರ್ಷಂಪ್ರತಿ ಹೊಸ ಆಧಾರ ಪತ್ರವನ್ನು (ಸನದು) ಅವರಿಂದ ಅಪೇಕ್ಷಿಸಬಾರದು." **(ಎಸ್.ಎಂ. ಜಾಫರ್‌ರು, ಗ್ಯಾನ್‌ಚಂದ್ರರಿಗೆ ತಿಳಿಸಿದ್ದು)**

ಔರಂಗಝೇಬನು, ಪ್ರಜೆಗಳ ಧಾರ್ಮಿಕ ಭಾವನೆಗಳನ್ನು ಬಹಳ ಶ್ರದ್ಧೆಯಿಂದ ಗೌರವಿಸುತ್ತಿದ್ದನೆಂದು ಭಾವಿಸಬೇಕಾಗಿದೆ. (ಪ್ರಜೆಗಳ ಭಾವನೆಗಳನ್ನು ಗೌರವಿಸಿ ಅಸ್ಸಾಮಿನಲ್ಲಿ ಪ್ರಾಚೀನ ಮುದ್ರೆಯಿರುವ ನಾಣ್ಯವನ್ನು ಬಂಗಾಳಿ ಲಿಪಿಯಲ್ಲಿ ಬಿಡುಗಡೆಗೊಳಿಸಿದರು.) ಆಡಳಿತದ 9ನೇ ವರ್ಷದ ಸಫರ್ ತಿಂಗಳ 2ರಂದು ಚಕ್ರವರ್ತಿ ಹೊರಡಿಸಿದ ಎರಡು ಆಜ್ಞೆಗಳು ನಮ್ಮ ಬಳಿಯಿದೆ. ಅಸ್ಸಾಮ್‌ನ ಗೌಹಟಿಯಲ್ಲಿರುವ ಉಮಾನಂದ ದೇವಳದ ಸುದಾಮ ಎಂಬ ಬ್ರಾಹ್ಮಣ ಅರ್ಚಕನ ಪರವಾಗಿ ಅದನ್ನು ಹೊರಡಿಸಲಾಗಿತ್ತು. ಅಸ್ಸಾಮ್‌ನ ಹಿಂದೂ ಆಡಳಿತಗಾರರು ಈ ದೇವಾಲಯ ಮತ್ತು ಅದರ ಪರಿಪಾಲನೆಯ ಖರ್ಚಿಗಾಗಿ ಅರ್ಚಕರಿಗಾಗಿ ಸ್ವಲ್ಪ ಜಮೀನು, ಕೆಲವು ಕಾಡುತ್ಪತ್ತಿಗಳನ್ನೂ ಅನುಮತಿಸಿದ್ದರು. ಈ ಸಂಸ್ಥಾನವನ್ನು ಔರಂಗಝೇಬನು ಸ್ವಾಧೀನಪಡಿಸಿದ ಕೂಡಲೇ ಅವರು ತಮಗಿಂತ ಮುಂಚಿನ ಹಿಂದೂ ರಾಜರು ಅನುಮತಿಸಿದ್ದ ಜಮೀನು ಮತ್ತು ಆದಾಯವನ್ನು ಪುನಃ ದೇವಾಲಯ

ಮತ್ತು ಅರ್ಚಕರಿಗೆ ಅನುಮತಿಸಿರುವುದನ್ನು ದೃಢೀಕರಿಸಿ ಆಜ್ಞೆ ಹೊರಡಿಸಿದರು.

ಗೌಹಟಿ ಆಜ್ಞೆಯಲ್ಲಿ ಹೀಗೆ ಹೇಳಲಾಗಿದೆ:

"ಇಂದಿನ ಮತ್ತು ಮುಂದಿನ ಪ್ರಧಾನರು, ಚೌಧರಿಗಳು, ಕಾನೂನಿಗರು, ಮುಖ ದಮರು ಮತ್ತು ಬಂಗೇಸರದ ರೈತರಿಗೂ ತಿಳಿಯಪಡಿಸುವುದೇನೆಂದರೆ- ಹಿಂದಿನ ಆಡಳಿತ ಗಾರರು, ಸರ್ಕಾರ ಗ್ರಾಮದ ಹೊರಗಿರುವ $2^1/_2$ ರೆವೆನ್ಯೂ ಬಾಬ್ತಿನಲ್ಲಿ 30 ರೂ. ಬೆಲೆಯ ಪ್ರಸ್ತುತ ಸ್ಥಳವನ್ನು ಉಮಾನಂದದ ಅರ್ಚಕ ಸುಧಾಮರಿಗೂ ಪುತ್ರರಿಗೂ ನೀಡಿದ್ದರು... ಇಂಟಕಾಲಿ ಗ್ರಾಮದ ರೆವೆನ್ಯೂಗೆ ಒಳಪಡದ ಅರಣ್ಯಭಾಗವನ್ನು ಪರಿಪಾಲನೆಯ ವೆಚ್ಚಕ್ಕಾಗಿ ಅನುಮತಿಸಲಾಗಿತ್ತು. ಅದು ಅವರ ಅಧೀನದಲ್ಲಿಯೇ ಸ್ಥಿರ ಪರಿಪಾಲನೆಗಾಗಿ ಬಿಟ್ಟು ಕೊಡಬೇಕು. ಅಲ್ಲಿ ಅವರು ಈ ಸಾಮ್ರಾಜ್ಯದ ಅನಶ್ವರತೆಗಾಗಿ ಪ್ರಾರ್ಥಿಸುತ್ತಿರಲಿ. ಕರ, ಕಂದಾಯ ಇತ್ಯಾದಿಗಳಿಗಾಗಿ ಯಾರೂ ಅವರನ್ನು ಪೀಡಿಸಬಾರದು. ಹೊಸ ಆಧಾರ ಪತ್ರಕ್ಕಾಗಿ ಒತ್ತಾಯಿಸಬಾರದು... ಅವರು ಇದಕ್ಕಾಗಿ ಅಂಜಬೇಕಾಗಿಲ್ಲ, ಚಕ್ರವರ್ತಿಯ ಸ್ಥಾನಾರೋಹಣದ 9ನೆಯ ವರ್ಷದ ಸಫರ್ 2ರಂದು ಬರೆದುದು."

**(ಅಸ್ಸಾಮ್ ರಿಸರ್ಚ್ ಸೊಸೈಟಿಯ ಜರ್ನಲ್‌ನಲ್ಲಿ ಪ್ರಕಟಿಸಿದ್ದು,**
**ಜನವರಿ- ಎಪ್ರಿಲ್, 1942, ಪುಟ:1-12)**

ಔರಂಗಝೇಬನಿಗೆ ಹಿಂದುಗಳು ಮತ್ತು ಅವರ ಧರ್ಮದೊಡನೆ ಸಹಿಷ್ಣುತಾಭಾವ ವಿತ್ತೆಂಬ ಅಭಿಪ್ರಾಯವನ್ನು ಉಜ್ಜೈನಿಯ ಮಹಾಕಾಳೇಶ್ವರ ದೇವಾಲಯದ ಪುರೋಹಿತರೂ ಸಮರ್ಥಿಸುತ್ತಾರೆ. ಅದು ಪ್ರಮುಖ ಶಿವಾಲಯಗಳಲ್ಲಿ ಸೇರಿದೆ. ಇಲ್ಲಿ ದಿನರಾತ್ರೆ ದೀಪ ಉರಿಸುತ್ತಾರೆ.

ಅದನ್ನು 'ನಂದಾದೀಪ'ವೆಂದು ಕರೆಯುತ್ತಾರೆ. ಈ ದೀಪಕ್ಕೆ ನಿತ್ಯ ನಾಲ್ಕು ಸೇರು ತುಪ್ಪ ಉಪಯೋಗಿಸಲಾಗುತ್ತಿತ್ತು. ಸರಕಾರಗಳು ಹಿಂದಿನ ಕಾಲದಿಂದಲೇ ಅದನ್ನು ನೀಡುತ್ತಿದ್ದುವು. ಮೊಗಲರ ಕಾಲದಲ್ಲಿಯೂ ಅದು ಲಭಿಸಿತ್ತೆಂದು ದೇವಾಲಯದ ಪುರೋಹಿತರು ಹೇಳುತ್ತಾರೆ. ಔರಂಗಝೇಬನೂ ಈ ಪ್ರಾಚೀನ ಸಂಪ್ರದಾಯವನ್ನು ಪಾಲಿಸಿದ್ದನು. ದೌರ್ಭಾಗ್ಯವಶಾತ್, ಇದಕ್ಕೆ ಆಧಾರವಾಗಿ ಅವರ ಬಳಿ ರಾಜಾಜ್ಞೆಯ ದಾಖಲೆ ಪತ್ರಗಳಿಲ್ಲ, ಹಾಗಿದ್ದರೂ, ಹಿಜರಿ 1061ರ ಶವ್ವಾಲ್ 5ರಂದು ಮುರಾದ್ ಬಕ್ಷ್ ತನ್ನ ತಂದೆಯ ಆಡಳಿತ ಕಾಲದಲ್ಲಿ ಹೊರಡಿಸಿದ ಒಂದು ವಿಜ್ಞಾಪನೆಯ ನಕಲು ಅವರ ಬಳಿಯಿದೆ. ಮಹಾ ಕಾಳೇಶ್ವರ ದೇವಾಲಯದ ಅಂದಿನ ಅರ್ಚಕರಾಗಿದ್ದ ದೇವರಾಮ್‌ರ ದೂರಿನನ್ವಯ ಅವರು ಚಕ್ರವರ್ತಿಯ ಪರವಾಗಿ ಈ ವಿಜ್ಞಾಪನೆಯನ್ನು ಪ್ರಕಟಿಸಿದ್ದರು. ಪಿರ್ಯಾದಿದಾರನ ವಾರೀಸು ಹಕ್ಕಿನ ನಿರ್ಣಯಕ್ಕಾಗಿ ಹಕೀಮ್ ಮುಹಮ್ಮದ್ ಮಹದಿಯವರು ಹಳೆಯ ಕಡತಗಳನ್ನು ಪರಿಶೀಲಿಸಿದರು. ತರುವಾಯ ದೇವಾಲಯದ ಈ 'ದೀಪಕ್ಕೆ' ಅಗತ್ಯವಿರುವ ನಾಲ್ಕು ಸೇರು

(ಅಕ್ಬರಿ) ತುಪ್ಪವನ್ನು ನೀಡುತ್ತಲಿರುವಂತೆ ಅಲ್ಲಿನ ತಹಶೀಲ್ದಾರರಿಗೆ ಆದೇಶಿಸಿದ್ದರು.

ಈ ಆಜ್ಞೆಯ ನಕಲನ್ನು ಹಿಜರಿ 1153ರಲ್ಲಿ ಮುಹಮ್ಮದ್ ಸಾದುಲ್ಲ ಹೊರಡಿಸಿದರು. ಅರ್ಥಾತ್, ಮೂಲ ಆಜ್ಞೆಯ 93 ವರ್ಷಗಳ ಬಳಿಕ, ಈಗಿನ ಪುರೋಹಿತರ ಅಭಿಪ್ರಾಯ ದಂತೆ ಹಲವು ವರ್ಷಗಳ ಬಳಿಕ. ಈ ನಕಲಿನ ಪ್ರಕಾಶನದಿಂದ, ಹಳೆಯ ಆಜ್ಞೆಯು ಅಂದಿನವರೆಗೂ ಜಾರಿಯಲ್ಲಿತ್ತೆಂದು ವ್ಯಕ್ತವಾಗುತ್ತದೆ. ಔರಂಗಝೇಬನೂ ಆ ಕಾಲಾವಧಿ ಯಲ್ಲಿ ಆಡಳಿತ ನಡೆಸಿದ್ದನು. ಇಂದಿನ ಕಾಲದಲ್ಲಿ ಆ ವಿಜ್ಞಾಪನೆಗೆ ಬೆಲೆಯಿಲ್ಲದಿರುವುದ ರಿಂದ ಆ ಅನೂರ್ಜಿತ ಹಳೆಯ ಆಜ್ಞೆಯ ಜೋಪಾನದ ಬಗ್ಗೆ ಯಾರೂ ಕಾಳಜಿ ವಹಿಸಲಿಲ್ಲ. ಈ ದೇವಾಲಯಕ್ಕೆ ಸಂಬಂಧಿಸಿ ನಾನು ಪರಿಶೀಲಿಸಿದ ಪ್ರಾಚ್ಯವಸ್ತು ಸಂಗ್ರಹಾಗಾರರಲ್ಲಿರುವ ಕೆಲವು ರಾಜಾಡಳಿತ ಕಡತಗಳಲ್ಲಿ, ಅಂದಿನ ಮಹಂತ ಲಕ್ಷ್ಮೀ ನಾರಾಯಣರ ಬಳಿ ಔರಂಗಝೇಬನ ಕಾಲದ ಕೆಲವು ದಾಖಲೆ ಪತ್ರಗಳಿದ್ದುವೆಂದು ತಿಳಿದು ಬರುತ್ತದೆ.

ಅಹ್ಮದಾಬಾದ್‌ನ ನಾಗರ್‌ಸೇಠ್ ನಿರ್ಮಿಸಿದ ಚಿಂತಾಮಣಿ ದೇವಾಲಯವನ್ನು ಕೆಡಹಲಾಗಿದೆಯೆಂದು ಕೆಲವು ಇತಿಹಾಸಗಾರರು ಹೇಳುತ್ತಿರುವರಾದರೂ ಅದು ಸುಳ್ಳೆಂದೇ ತೋರುತ್ತದೆ. ಏಕೆಂದರೆ, ಈ ಔರಂಗಝೇಬನೇ ಇದೇ ನಾಗರ್‌ಸೇಠ್‌ನಿಗೆ ಶತ್ರುಂಜಯ ಮತ್ತು ಅಬೂ ದೇವಾಲಯಗಳಿಗಾಗಿ ಜಮೀನು ನೀಡಿದ್ದನು.

ಶತ್ರುಂಜಯ ಕ್ಷೇತ್ರಕ್ಕೆ ಭೂಮಿ ನೀಡಿದ ಆಜ್ಞೆ ಹೀಗಿದೆ: "...ಕೊನೆಯ ಹರ್ಷದಾಯಕ ವಿಷಯವೇನೆಂದರೆ, ಆಭರಣ ವ್ಯಾಪಾರಿಯಾಗಿರುವ ಸತಿದಾಸ್ ತನ್ನ ಮಹಾನ್ ಸಾನ್ನಿಧ್ಯ ದಿಂದ ರಾಜದರ್ಬಾರಿಗೆ ಮನವಿ ಸಲ್ಲಿಸಿರುತ್ತಾರೆ... ಅವರು ಚಕ್ರವರ್ತಿಯನ್ನು ಸೊಲೊಮನ್ ಮತ್ತು ದೇವದಾಸನಾದ (ಮುಹಮ್ಮದ್‌ರ) ಅನುಯಾಯಿಯೆಂದು ಪ್ರಶಂಸಿಸಿ ಸಲ್ಲಿಸಿರುವ ಮನವಿಯಲ್ಲಿ 31ನೇ ವರ್ಷದ ಪವಿತ್ರ ರಮಝಾನ್ ತಿಂಗಳ 19ನೇ ದಿನ ಸೂಬ ಅಹ್ಮದಾಬಾದ್‌ನ ಭಾಗವಾಗಿರುವ ಸೂರತ್ ಸರಕಾರಕ್ಕೆ ಸೇರಿದ (ಎರಡು ಲಕ್ಷ 'ದಾಮ್' ತೀರ್ವೆಯಿರುವ) ಸತ್ರಂಜ್ ಜಿಲ್ಲೆಯನ್ನು ಇನಾಮಾಗಿ ಮನವಿದಾರನಿಗೆ ರಾಜ ದರ್ಬಾರು ಅನುಮತಿಸುವುದೆಂದು ನಿರೀಕ್ಷಿಸುತ್ತಿದ್ದಾರೆ. ಆದ್ದರಿಂದ ನಾವು ಈ ಹಿಂದೆ ಮಾಡುತ್ತಿದ್ದ ರೀತಿಯಲ್ಲಿಯೇ ಮೇಲೆ ಹೇಳಿದ ಜಿಲ್ಲೆಯನ್ನು ಮನವಿದಾರನಿಗೆ ಇನಾಮಾಗಿ ನೀಡುತ್ತೇವೆ. ಆದ್ದರಿಂದ ಸೂಬಾದ ಇಂದಿನ ಮತ್ತು ಮುಂದಿನ ಕಾರ್ಯನಿರ್ವಾಹಕರು ಮತ್ತು ಮೇಲೆ ಹೇಳಿದ ಸರಕಾರವು ತಿಳಿದಿರಬೇಕಾದುದೇನೆಂದರೆ, ಈ ಪವಿತ್ರ ಆಜ್ಞೆಯನ್ವಯ ಮೇಲೆ ಹೇಳಿರುವ ಜಿಲ್ಲೆಯು ಮೇಲೆ ಸೂಚಿಸಿದ ವ್ಯಕ್ತಿಯ ಸ್ವಾಧೀನವಿರುವುದು. ಅವರ ಉತ್ತರಾ ಧಿಕಾರಿಗಳಿಗೆ ವಾರೀಸು ನಿಯಮದ ಪ್ರಕಾರ ಅದು ತಲೆತಲಾಂತರಗಳಿಗೆ ಹಸ್ತಾಂತರ ವಾಗುವುದು. ಎಲ್ಲ ರೀತಿಯ ತೆರಿಗೆ ಮತ್ತಿತರ ನಿಬಂಧನೆಗಳಿಂದ ಅವರಿಗೆ ವಿನಾಯತಿಯಿ ರುವುದು. ಪ್ರತಿವರ್ಷವೂ ಹೊಸ ಆಧಾರ ಪತ್ರ(ಸನದು)ಬೇಕೆಂದು ಅಪೇಕ್ಷಿಸಬಾರದು. ಈ

ಆಜ್ಞೆಯಲ್ಲಿ ಕಿಂಚಿತ್ತೂ ಬದಲಾವಣೆ ಮಾಡಬಾರದು. ದುಲ್ಕಅದ್ ತಿಂಗಳ 9ನೇ ತಾರೀಕು ಹಿಜರಿ ವರ್ಷ 1068 (ಕ್ರಿ.ಶ. 1658)ರಲ್ಲಿ ಬರೆದದ್ದು."

(ಭಾರತದ ಪ್ರಧಾನ ಕಾರ್ಯದರ್ಶಿಯವರಿಗೆ 1923ರಲ್ಲಿ ಜೈನರು ಸಲ್ಲಿಸಿದ್ದು.)

ನಾಗರಸೇತ್ ಔರಂಗಝೇಬನ ಕೆಲವು ಯುದ್ಧಗಳಿಗೆ ನೆರವಾಗಿದ್ದರು. ಅವರ ಸೇವೆಯಿಂದ ಸಂತೃಪ್ತನಾದ ಚಕ್ರವರ್ತಿಯು ಬಹುಮಾನವಾಗಿ ಜಮೀನು ನೀಡಿದ್ದನು. ಇದು ಗಿರ್ನಾರ್ ಮತ್ತು ಅಬೂಗಳಲ್ಲಿ ಕ್ಷೇತ್ರಗಳಿರುವ ಸ್ಥಳಗಳಾಗಿವೆ. ಆ ಕುರಿತು ನೀಡಲಾದ ಆಜ್ಞೆ ಹೀಗಿದೆ:

"ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ:

(ತುಗ್‌ರ) ಹೇ, ಸತ್ಯವಿಶ್ವಾಸಿಗಳೇ! ದೇವನನ್ನು ಅನುಸರಿಸಿರಿ, ಪ್ರವಾದಿಯವರನ್ನು ಅನುಸರಿಸಿರಿ, ನಿಮ್ಮ ಆಡಳಿತಗಾರರನ್ನೂ ಅನುಸರಿಸಿರಿ.

(ಸೀನ್) ಅಬುಲ್ ಮುಝಫ್ಫರ್ ಮುಹ್‌ಯುದ್ದೀನ್ ಮುಹಮ್ಮದ್ ಔರಂಗಝೇಬ್"

ಆಲಂಗೀರ್ ಬಾದಷಹ ಖಾಝಿ:

ಈಗ ವಿಶೇಷಾಜ್ಞೆಯನ್ನು ಹೊರಡಿಸಿರುವುದೇಕೆಂದರೆ- ಶಾವ್ರಾಕ ಸಮುದಾಯದ ಸಹಸ್‌ಬಾಯಿಯ ಪುತ್ರ ಶಾಂತಿದಾಸ್ ಜವಹರಿ ಸೈನಿಕ ಕಾರ್ಯಾಚರಣೆಯಲ್ಲಿ ಬಹಳಷ್ಟು ನೆರವು ನೀಡಿದ ವ್ಯಕ್ತಿಯೆಂಬ ನೆಲೆಯಲ್ಲಿ ಕೆಲವು ವಿಶೇಷ ಸೌಲಭ್ಯಗಳನ್ನು ನಿರೀಕ್ಷಿಸುತ್ತಿದ್ದಾರೆ. ಆದ್ದರಿಂದ ನಮ್ಮ ಗೌರವ ಸೂಚಕವಾಗಿ ಅಹ್ಮದಾಬಾದ್‌ಗೆ ಸೇರಿದ ಪಾಲಿಟಾನ ಜಿಲ್ಲೆ ಮತ್ತು ಕ್ಷೇತ್ರವಿರುವ ಪ್ರಸಿದ್ಧ ಶತ್ರಂಜ್ ಬೆಟ್ಟ ಪ್ರದೇಶಗಳನ್ನೂ ನಾವು ಸಂಪೂರ್ಣವಾಗಿ ಶಾವ್ರಾಕ ಸಮುದಾಯದ ಶಾಂತಿದಾಸ್ ಜವಹರಿಗೆ ನೀಡುತ್ತೇವೆ. ಶತ್ರಂಜ್ ಬೆಟ್ಟಗಳಲ್ಲಿರಬಹುದಾದ ಮರ, ಉರುವಲುಗಳು ಶಾವ್ರಾಕ ಸಮುದಾಯಕ್ಕೆ ಸೇರುವುದು. ಅವರು ಅದನ್ನು ತಮ್ಮ ಅಗತ್ಯಾನುಸಾರ ಬಳಸಿಕೊಳ್ಳಬಹುದು. ಶತ್ರಂಜ್ ಬೆಟ್ಟಗಳ ಮತ್ತು ಕ್ಷೇತ್ರದ ಪಾಲಕರು ಯಾರೇ ಆಗಿದ್ದರೂ ಪಾಲಿಟಾನದ ಆದಾಯಕ್ಕೆ ಅರ್ಹರಾಗಿರುತ್ತಾರೆ. ಈ ಚಿರಂತನ ಸರಕಾರದ ಶ್ರೇಯೋಭಿವೃದ್ಧಿಗಾಗಿ ಅವರು ಪ್ರಾರ್ಥಿಸುತ್ತಿರಲಿ. ಇಂದಿನ ಮತ್ತು ಮುಂದಿನ ಆಡಳಿತ ಸಮಿತಿಯ ಉದ್ಯೋಗಸ್ಥರು, ಜಾಗೀರುದಾರರು ಮತ್ತಿತರರು ಈ ಆಜ್ಞೆಯನ್ನು ನಿಷ್ಕರ್ಷೆಯಿಂದ ಪಾಲಿಸಬೇಕು. ಅದರಲ್ಲಿ ಯಾವ ರೀತಿಯ ಲೋಪವನ್ನೂ ಮಾಡಬಾರದು.

"ಅದಲ್ಲದೆ, ಸಿರೋಹಿಗೆ ಸೇರಿದ ಜುನಾಗಢದಲ್ಲಿ ಗಿರ್ನಾರ್ ಎಂದು ಪ್ರಸಿದ್ಧವಾದ ಒಂದು ಕಾಡು ಮತ್ತು ಅಬುಜಿಯಲ್ಲಿ ಒಂದು ಬೆಟ್ಟವಿದೆ. ವಿಶೇಷ ಸೌಲಭ್ಯವೆಂಬ ನೆಲೆಯಲ್ಲಿ ಅವೆರಡನ್ನೂ ಶಾವ್ರಾಕ ಸಮುದಾಯದ ಶಾಂತಿದಾಸ್ ಜವಹರಿಗೆ ನೀಡುತ್ತೇವೆ. ಆ ಮೂಲಕ ಅವರು ಪೂರ್ಣ ಸಂತೃಪ್ತರಾಗಲಿ. ಅವರ ವಿಷಯದಲ್ಲಿ ಯಾರೂ ಹಸ್ತಕ್ಷೇಪ

ನಡೆಸಬಾರದೆಂಬುದನ್ನು ಅಧಿಕಾರಿಗಳು ತಿಳಿದಿರಲಿ. ಯಾವ ರಾಜಂದಿರೂ ಅವರಿಗೆ ಅಡ್ಡಿಪಡಿಸಬಾರದು ಮಾತ್ರವಲ್ಲ, ನಮ್ಮ ರಾಜಪ್ರೀತಿಗೆ ಪಾತ್ರರಾಗಲು ಅವರಿಗೆ ನೆರವಾಗ ಬೇಕು. ಪ್ರತಿವರ್ಷ ಹೊಸ ಸನದು ಬೇಕೆಂದು ಕೇಳಬಾರದು. ಈ ಗ್ರಾಮ ಮತ್ತು ಮೂರು ಬೆಟ್ಟಗಳ ಹಕ್ಕಿಗಾಗಿ ಯಾರಾದರೂ ವಾದಿಸಿದರೆ ಅವರು ಜನರಂತೆಯೇ ದೇವನ ಕೋಪಕ್ಕೂ ಗುರಿಯಾಗುವರು ಅವರಿಗೆ ವಿಶೇಷ ಸನದನ್ನೇ ನೀಡಲಾಗಿದೆ.

ಹಿಜರಿ ವರ್ಷ 1070ರ ರಜಬ್ ತಿಂಗಳ 10 ರಂದು ಬರೆದದ್ದು (ಮಾರ್ಚ್ 12, 1660)." (ಮುಂಬೈಯ ವಾರ್ಸಿಟಿ ಜರ್ನಲ್, ಸಂಪುಟ: 1, ಪುಟ: 54)

ಆದರೆ, ವಾರಣಾಸಿಯ ವಿಶ್ವನಾಥ ಕ್ಷೇತ್ರವನ್ನೂ ಗೋಲ್ಕೊಂಡದ ಜುಮಾ ಮಸೀದಿಯನ್ನೂ ಕೆಡಹುವಂತೆ ಔರಂಗಝೇಬ್ ಆಜ್ಞಾಪಿಸಿದ ಬಗ್ಗೆ ಸ್ಪಷ್ಟ ಪುರಾವೆಗಳಿವೆ. ಈ ಕ್ಷೇತ್ರ ಮತ್ತು ಮಸೀದಿಯ ಧ್ವಂಸಕ್ಕೆ ಕೆಲವು ಅನಿವಾರ್ಯ ಕಾರಣ ಮತ್ತು ಹಿತವನ್ನು ಮನಗಂಡಿರಬೇಕೆಂದು ಭಾಸವಾಗುತ್ತದೆ. ವಿಶ್ವನಾಥ ದೇವಾಲಯದ ಧ್ವಂಸಕ್ಕೆ ಕಾರಣವಾದ ಘಟನೆ ಹೀಗಿದೆ: ಔರಂಗಝೇಬನು ಬಂಗಾಳಕ್ಕೆ ತೆರಳುವ ಹಾದಿಯಲ್ಲಿ ಬನಾರಸ್ ಸಮೀಪ ತಲಪಿದಾಗ ಅವರ ಪರಿವಾರದಲ್ಲಿದ್ದ ಹಿಂದೂ ರಾಜರು ಪಯಣವನ್ನು ನಿಲ್ಲಿಸಿ ಒಂದು ದಿನ ಅಲ್ಲಿ ತಂಗಬೇಕೆಂದು ಅಪೇಕ್ಷಿಸಿದರು. ಅದರಿಂದ ತಮ್ಮ ರಾಣಿಯರಿಗೆ ವಾರಣಾಸಿಗೆ ಹೋಗಿ, ಗಂಗೆಯಲ್ಲಿ ಸ್ನಾನಮಾಡಿ, ವಿಶ್ವನಾಥ ದೇವನನ್ನು ಪೂಜಿಸುವ ಅವಕಾಶ ದೊರೆಯುವುದೆಂದು ಅವರು ತಿಳಿಸಿದರು. ಈ ವಿನಂತಿಯನ್ನು ಸಂತೋಷದಿಂದ ಒಪ್ಪಿದ ಔರಂಗಝೇಬರು ವಾರಣಾಸಿಯ ಐದು ಮೈಲು ದೂರದಲ್ಲಿ ಸೇನಾ ಶಿಬಿರವನ್ನು ಏರ್ಪಡಿಸಿದರು. ರಾಣಿಯರು ಪಲ್ಲಕ್ಕಿಯಲ್ಲಿ ಸಾಗಿದರು. ಗಂಗೆಯಲ್ಲಿ ಸ್ನಾನಮಾಡಿ ಅವರು ವಿಶ್ವನಾಥ ದೇವಾಲಯವನ್ನು ಸಂದರ್ಶಿಸಿದರು. ಪೂಜಾ ಕರ್ಮಗಳ ಬಳಿಕ ಒಬ್ಬರ ಹೊರತು- ಕಛ್‌ನ ಮಹಾರಾಣಿಯ ಹೊರತು- ಎಲ್ಲ ರಾಣಿಯರೂ ಮರಳಿ ಬಂದರು. ದೇವಾಲಯದ ಪರಿಸರಗಳಲ್ಲಿ ತೀವ್ರಶೋಧ ನಡೆಸಿದರೂ ರಾಣಿಯ ಪತ್ತೆಯಾಗಲಿಲ್ಲ. ಈ ಸುದ್ದಿ ಕೇಳಿ ಔರಂಗಝೇಬನು ಬಹಳ ಕಳವಳಗೊಂಡನು, ರಾಣಿಯನ್ನು ಪತ್ತೆಹಚ್ಚುವಂತೆ ಅವನು ತನ್ನ ಉನ್ನತಾಧಿಕಾರಿಗಳಿಗೆ ಆದೇಶಿಸಿದನು. ಕೊನೆಗೆ ಗಣೇಶ ಮೂರ್ತಿಯನ್ನು ಪ್ರತಿಷ್ಠಾಪಿಸಿರುವ ಗೋಡೆಯನ್ನು ಸರಿಸಬಹುದಾಗಿದೆಯೆಂದು ಅವರು ತಿಳಿದುಕೊಂಡರು. ವಿಗ್ರಹವನ್ನು ಸರಿಸಿದಾಗ ಕೆಳ ಅಂತಸ್ತಿನ ಮೆಟ್ಟಲುಗಳು ಅವರಿಗೆ ಕಾಣಿಸಿದುವು. ಅಲ್ಲಿ ಅಪಮಾನಿತ ಸ್ಥಿತಿಯಲ್ಲಿ ರೋದಿಸುತ್ತಿರುವ ರಾಣಿಯನ್ನು ನೋಡಿ ಅವರು ದಿಗ್ಭ್ರಾಂತರಾದರು. ಈ ಒಳಮಾಳಿಗೆಯು ವಿಶ್ವನಾಥಮೂರ್ತಿಯ ಆಸನ ಪೀಠದ ನೇರ ಅಡಿಭಾಗದಲ್ಲಿತ್ತು. ರಾಜಂದಿರು ಕೋಪದಿಂದ ಕಿಡಿಕಿಡಿಯಾದರು.

ಮಹಿಳೆಯರ ಮೇಲೆ ನಡೆದ ಈ ಕ್ರೌರ್ಯಕ್ಕೆ ಕಠಿಣ ದಂಡನೆ ವಿಧಿಸಬೇಕೆಂದು ಅವರು ಒತ್ತಾಯಿಸಿದರು. ಪವಿತ್ರ ಪೀಠವನ್ನು ಮಲಿನ ಗೊಳಿಸಿರುವುದರಿಂದ ವಿಶ್ವನಾಥ

ಮೂರ್ತಿಯನ್ನು ಸ್ಥಳಾಂತರಿಸಿ ಪ್ರತಿಷ್ಠಾಪಿಸಬೇಕೆಂದು ಔರಂಗಝೇಬ್ ಆಜ್ಞಾಪಿಸಿದನು. ಮಹಂತನನ್ನು ಬಂಧಿಸಿ, ದಂಡಿಸಿ, ದೇವಾಲಯವನ್ನು ಕೆಡಹಿಸಿದನು.

ಪಟ್ಟಾಭಿ ಸೀತಾರಾಮಯ್ಯನವರು 'ಗರಿಗಳು ಮತ್ತು ಕಲ್ಲುಗಳು' (Feathers and Stones) ಎಂಬ ಖ್ಯಾತ ಗ್ರಂಥದಲ್ಲಿ ಈ ಘಟನೆಯನ್ನು ಸಾಕ್ಷ್ಯಾಧಾರಗಳ ಸಹಿತ ವಿವರಿಸಿದ್ದಾರೆ. ಪಾಟ್ನಾ ವಸ್ತು ಸಂಗ್ರಹಾಲಯದ ಹಿಂದಿನ ಮುಖ್ಯಸ್ಥ ಡಾ| ಪಿ.ಎಲ್.ಗುಪ್ತಾರು ಈ ಘಟನೆಯನ್ನು ಬಲವಾಗಿ ಸಮರ್ಥಿಸಿದ್ದಾರೆ.

ಜುಮಾ ಮಸೀದಿಯನ್ನು ಕೆಡಹಿದ ಕಥೆ ಹೀಗಿದೆ: ಗೋಲ್ಕೊಂಡದ ಪ್ರಸಿದ್ಧ ಆಡಳಿತಗಾರ ತಾನ್‌ಷಾ, ಸಂಸ್ಥಾನದ ಕಂದಾಯವನ್ನು ಸಂಗ್ರಹಿಸುತ್ತಿದ್ದರೂ ದೆಹಲಿಯ ಪಾಲನ್ನು ಪಾವತಿಸುತ್ತಿರಲಿಲ್ಲ. ಕೆಲವಾರು ವರ್ಷಗಳಲ್ಲಿ ಆ ಮೊತ್ತ ಕೋಟಿಗಳಿಗೇರಿತು. ತಾನ್‌ಷಾನನ್ನು ಸಮಾಧಿ ಮಾಡಿದ್ದ ಖಜಾನೆಯ ಮೇಲೆ ಒಂದು ಜುಮಾ ಮಸೀದಿಯನ್ನು ನಿರ್ಮಿಸಲಾಗಿತ್ತು. ಈ ವಿಷಯ ತಿಳಿದ ಔರಂಗಝೇಬನು ಮಸೀದಿಯನ್ನು ಕೆಡಹಿ ಹಾಕುವಂತೆ ಆಜ್ಞಾಪಿಸಿದನು. ಹೂಳಲ್ಪಟ್ಟ ಖಜಾನೆಯನ್ನು ಸ್ವಾಧೀನಪಡಿಸಿ ಜನಕಲ್ಯಾಣ ಕಾರ್ಯಗಳಿಗಾಗಿ ವಿನಿಯೋಗಿಸಿದನು. ನ್ಯಾಯಪಾಲನೆಯಲ್ಲಿ ಔರಂಗಝೇಬನಿಗೆ ಮಸೀದಿ ಅಥವಾ ಮಂದಿರವೆಂಬ ಭೇದವಿರಲಿಲ್ಲವೆಂದು ಈ ಎರಡು ಘಟನೆಗಳಿಂದ ವ್ಯಕ್ತವಾಗುತ್ತದೆ.

ದೌರ್ಭಾಗ್ಯವಶಾತ್, ಮಧ್ಯಕಾಲದ- ಆಧುನಿಕ ಭಾರತೇತಿಹಾಸದ- ಘಟನೆಗಳನ್ನೂ ಆ ಪಾತ್ರಗಳನ್ನೂ ವಿಕೃತಗೊಳಿಸಿ ತಪ್ಪಾಗಿ ಚಿತ್ರೀಕರಿಸಿರುವವುಗಳನ್ನು ಯಥಾವತ್ತಾಗಿ ದೈವಸತ್ಯ ವೆಂಬಂತೆ ಅಂಗೀಕರಿಸಲಾಗುತ್ತಿದೆ. ವಾಸ್ತವಿಕಾಂಶಗಳನ್ನು ವಿವರಿಸಲು ಪ್ರಯತ್ನಿಸುವವರನ್ನೂ ಸತ್ಯಾಸತ್ಯಗಳನ್ನು ಬೇರ್ಪಡಿಸುವವರನ್ನೂ ತಿರುಚಿದವುಗಳನ್ನು ಅನಾವರಣಗೊಳಿಸುವವರನ್ನೂ ಅಪರಾಧಿಗಳೆಂದು ಪರಿಗಣಿಸುವ ಮನೋಭಾವ ಇಂದು ಕಂಡುಬರುತ್ತಿದೆ. ಸ್ಥಾಪಿತ-ಕೋಮು ಹಿತಾಸಕ್ತರು ಇತಿಹಾಸವನ್ನು ತಿರುಚಿ ವಿಕೃತಗೊಳಿಸುವ ಕಾರ್ಯವನ್ನು ಮುಂದು ವರಿಸುತ್ತಿದ್ದಾರೆ.

ಇಲ್ಲಿ ಇನ್ನೊಂದು ಅಂಶವೂ ಶೋಚನೀಯವಾಗಿದೆ. ಉಭಯ ವರ್ಗಕ್ಕೆ ಸೇರಿದ ಸಂಪ್ರದಾಯವಾದಿಗಳು ಭಾರತದ ಮಧ್ಯಕಾಲೀನ ಇತಿಹಾಸವನ್ನು ಮಾತ್ರವಲ್ಲ, ವೇದ ಮತ್ತು ಕುರ್‌ಆನ್‌ನ ಬೋಧನೆಗಳನ್ನೂ ತಪ್ಪಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಆತ್ಮಸಾಕ್ಷಿ ಯಿಲ್ಲದ ರಾಜಕಾರಣಿಗಳು ವೈರತ್ವಕ್ಕೆ ಗಾಳಿ ಹಾಕುತ್ತಿದ್ದಾರೆ. ಈ ಚಂಡ ಮಾರುತದಿಂದ ತಮ್ಮ ದೇಶ ಬಾಂಧವರು ಕಿತ್ತೆಸೆಯಲ್ಪಡುವರೆಂಬುದನ್ನು ಅವರು ಮರೆಯುತ್ತಾರೆ."

(ಸರ್ ಸೈಯದ್: ಮಖಾಲಾತೆ ಸರ್ ಸೈಯದ್,
ಎಸ್.ಎಮ್. ಇಸ್ಮಾಈಲ್ ಕ್ರೋಢೀಕರಿಸಿದ್ದು, ಸಂಪುಟ:10, ಪುಟ:50)